# * ಮನೋರಮಾ. *



ಲೇಖಕ ಮತ್ತು ಪ್ರಕಾಶಕ:--


ರಾ. ತ್ರ್ಯ. ಕರ್ಪೂರ,

ಮ್ಯಾನೇಜರ, ಸ. ಚ., ಆನಂದವನ.





(೩ನೆಯ ಆವೃತ್ತಿ)

೧೯೩೭ ನವಂಬರ.

ಬೆಲೆ ೧೪ ಆಣೆ.

## ಶ್ರೀ  ಲೇಖಕನ ಎರಡು ಶಬ್ದಗಳು.

ಪ್ರಸ್ತುತದ ಸಮಾಜ ಸ್ಥಿತಿಯನ್ನು ಮನಸ್ಸಿನಲ್ಲಿ ತಂದು ಈ ಕಾದಂಬರಿಯನ್ನು ಬರೆದಿರುತ್ತೇನೆ ಇದರ ವಾಚನದಿಂದ ಹಲಕೆಲವರಾದರೂ ತಮ್ಮಲ್ಲಿಯ ದುರ್ವೃತ್ತಿಗಳನ್ನು ತ್ಯಜಿಸಿದರೆ ಲೇಖಕನಿಗೆ ಯೋಗ್ಯ ಪ್ರತಿಫಲ ಸಿಕ್ಕಂತಾಗುವದು! ನೈತಿಕ ಪಥಾವಲಂಬಿಗಳಾದ ಮಹಾತ್ಮರಿಗೆ ಕಡೆಗೆ ಅನಿಷ್ಟವಿಲ್ಲೆಂಬದನ್ನು ಈ ಕಾದಂಬರಿಯು ತೋರಿಸುತ್ತದೆ. ಕಾದಂಬರಿಯು ತೋರಿಸುವದಾದರೂ ಏನು? ಈಶ್ವರೀ ನಿಯಮವೇ ಹಾಗಿರುವದರಿಂದ ಈ ಸಂಗತಿಯು ಪ್ರತಿಯೊಬ್ಬನ ಅನುಭವಕ್ಕೆ ಬಂದೇ ತೀರುವದು. ಇದನ್ನು ಪ್ರತಿಯೊಬ್ಬನು ಲಕ್ಷ್ಯದಲ್ಲಿಟ್ಟುಕೊಂಡು ನಡೆದರೆ ಸಮಾಜವು ಹಾ ಹಾ ಅನ್ನುವಷ್ಟರಲ್ಲಿ ಸುಧಾರಿಸುವದು. ಶ್ರೀ ಸದ್ಗುರುವು ಇಂಥ ಸದ್ಬುದ್ಧಿಯನ್ನು ಎಲ್ಲರಿಗೂ ಒದಗಿಸಿಕೊಡಲಿ!!

ಆನಂದವನ,
ತಾ|| 12-1-1921.

ಸಜ್ಜನ ವಿಧೇಯ,
ಕರ್ಪೂರ.

---

**೨ನೆಯ ಆವೃತ್ತಿಯ ಬಗ್ಗೆ:**—ಮೊದಲನೆಯ ಆವೃತ್ತಿಯು ಲೋಕಪ್ರಿಯವಾದ್ದರಿಂದ ಈ ೨ನೇ ಆವೃತ್ತಿಯನ್ನು ಹೊರಡಿಸಿದೆ. ನಮ್ಮ ವಾಚಕರು ಎಂದಿನಂತೆ ಆಶ್ರಯಕೊಡಬೇಕಾಗಿ ವಿನಂತಿ.

ತಾ|| 6-11-1927.

ಪ್ರಕಾಶಕ.

ಆನಂದವನದ ಶ್ರೀ ಶೇಷಾಚಲ ಪ್ರೆಸ್ಸಿನಲ್ಲಿ ಭಿ. ವ. ಕಾಳೆ,
ಇವರಿಂದ ಮುದ್ರಿಸಲ್ಪಟ್ಟಿತು.

# ಶ್ರೀ ಮನೋರಮಾ.

(ಸಾಮಾಜಿಕ ಕಾದಂಬರಿ)



## 1



ಚೈತ್ರಮಾಸದ ಕೃಷ್ಣಪಕ್ಷ; ನವಪಲ್ಲವಗಳು ಚಿಗಿತು ಮನೋಲ್ಲಾಸಕ್ಕೆ ಇಂಬುಗೊಡುತ್ತಲಿವೆ; ಕೋಗಿಲೆಗಳ ಇಂಚರವು ಕರ್ಣಾನಂದಕರವಾಗುತ್ತಲಿವೆ. ಮಲಯಮಾರುತನು ಸುಖವನ್ನು ಬೀರುತಲಿದ್ದಾನೆ. ಆದರೂ ಶಂಕರರಾಯನ ಆತ್ಮವು ತಳಮಳಗೊಳ್ಳುತ್ತಲಿರುವದು. ಬಹಿರಂಗದ ಯಾವ ಸೃಷ್ಟಿಯ ಸೌಂದರ್ಯಗಳು ಅವನನ್ನು ರಮಿಸಲಿಕ್ಕೆ ಸಮರ್ಥವಾಗಲೊಲ್ಲವು. ರಾತ್ರಿಯು ಹೆಚ್ಚುತ್ತ ನಡೆದಂತೆ ಆತನ ವ್ಯಥೆಯೂ ಬೆಳೆಯುತ್ತ ಹೋಯಿತು. ಮನೆಯವರಿಗೆ ಆತನ ಜೀವಿತದ ಆಶೆಯು ತಪ್ಪಿತು. ಇನ್ನೇನು ಈತನು ಬದುಕಿ ಹೌದಾಗುವನು? ಎಂದು ಆತನ ಮಕ್ಕಳೂ, ಹೆಂಡತಿಯೂ ಚಿಂತಿಸಲಾರಂಭಿಸಿದರು. ಅವರು ತಲೆಕತ್ತರ, ಕಾಲಬಳಿಯಲ್ಲಿ ಹಾಗು ಎಡಬಲ ಪಕ್ಕಗಳಲ್ಲಿ ಕುಳಿತು ಮರಣೋನ್ಮುಖನಾಗಿದ್ದ ಆತನನ್ನು ಎವೆಯಿಕ್ಕದೆ ನೋಡುತ್ತಿದ್ದರು. ಆಗಿನ ಅವರ ಸ್ಥಿತಿಯನ್ನು ವರ್ಣಿಸಲಸದಳವು. ಅವರ ಕಣ್ಣುಗಳಿಂದ ಅಶ್ರುಗಳುದುರುವದು ಮಾತ್ರ ಸ್ಪಷ್ಟವಾಗಿ ಕಾಣುತ್ತಿತ್ತು. ತುಟಿಗಳು ನಡುಗುತ್ತಿದ್ದವು; ಆದರೆ ಒಬ್ಬರೂ ಒಟ್ಟೊಂದು ಮಾತಾಡುತ್ತಿರಲಿಲ್ಲ.

ನೋಡನೋಡುವಷ್ಟರಲ್ಲಿ ಶಂಕರರಾಯನ ಶ್ವಾಸವು ನಿಂತಿತು. ಶರೀರವ್ಯಥೆಯನ್ನು ಹಾಗು ಮನೋವ್ಯಥೆಯನ್ನು ಸಹಿಸಿ-ಸಹಿಸಿ, ಒಮ್ಮೆ ಆತನ ಜೀವವು ಆಪ್ತೇಷ್ಟರನ್ನು ಬಿಟ್ಟು ಯಾವ ಲೋಕಕ್ಕೋ ಹೋಗಿಬಿಟ್ಟಿತು. ಆತನ ಜಡಶರೀರವು ಕಾಷ್ಠವತ್ ಬಿದ್ದುಕೊಂಡಿತ್ತು.

ಹರ! ಹರ! ಆಗಿನ ಪ್ರಸಂಗವನ್ನೇನು ವರ್ಣಿಸಬೇಕು? ಆ ಮನೆಯೊಳಗೆ ಒಮ್ಮೆಲೆ ಹಾಹಾಕಾರವೆದ್ದಿತು. ಹೋಗಿಬರುವವರು ಮನೆಯನ್ನು ಮುತ್ತಿದರು. ನೋಡಬಂದವರು ಆ ದುಃಖಿತಕುಟುಂಬದವರನ್ನು ಕುರಿತು—"ನೀವು ತಿಳಿದವರಿದ್ದು, ಹೀಗೆ ದುಃಖಮಾಡುತ್ತೀರಲ್ಲ! ಇದೇನು? ಇದು ಮೃತ್ಯುಲೋಕ...ರುವದು. ಹುಟ್ಟಿದ ಮನುಷ್ಯನು ಸಾಯುತಕ್ಕವನೆ; ಶಂಕರರಾಯನು ಮಕ್ಕಳು-ಮರಿಗಳ ಮುಂದೆ ಸತ್ತನು, ಪುಣ್ಯವಂತನಾಗಿ ಹೋಗಿದ್ದು, ನೀವು ಈ ಪರಿ ಶೋಕಿಸುವದು ವಿಹಿತವೆ?" ಎಂದು ಸಮಾಧಾನೋಕ್ತಿಗಳನ್ನು ಹೇಳಲಾರಂಭಿಸಿದರು. ಕಾಲಾವಧಿಯಿಂದ ದುಃಖವು ತನ್ನಷ್ಟಕ್ಕೆ ತಾನೇ ಶಾಂತವಾಗುವದೆಂಬ ಮಾತು ಪ್ರತಿಯೊಬ್ಬನಿಗೂ ಅನುಭವಸಿದ್ಧವಾದದ್ದು! ಕದಾಚಿತ್ ಹೀಗಾಗದಿದ್ದರೆ, ಜಗತ್ತಿನಲ್ಲಿ ಇದುವರೆಗೆ ಯಾರೂ ಸಂಸಾರವನ್ನು ಮಾಡುತ್ತಿರಲಿಲ್ಲ!

ಎಲ್ಲ ದುಃಖಗಳಲ್ಲಿ ಹಿರಣ್ಯಾಭಾವವೆಂಬ ದುಃಖವು ಬಲು ಕೆಟ್ಟದು. ಶಂಕರರಾಯನು ಪ್ರತಿಷ್ಠಿತ ಗೃಹಸ್ಥನಾಗಿದ್ದರೂ ಈಗ ಆತನ ಮನೆಯಲ್ಲಿ ಮಧ್ಯಾಹ್ನಕ್ಕೆ ಗತಿಯಿದ್ದಿಲ್ಲ. ಹಿರಿಯಮಗನಾದ ವಾಸುದೇವರಾಯನು ತಂದೆಯ ಸಂಸ್ಕಾರದ ಯೋಚನೆಯಲ್ಲಿ ಬಿದ್ದನು. ಕೈಯಲ್ಲಿ ಕಾಸಿಲ್ಲ: ನೆರೆಮನೆಯವರನ್ನು ಕೇಳುವಹಾಗಿಲ್ಲ: ಕೆಲಸವು ತಡೆಯತಕ್ಕದ್ದಲ್ಲ. ಇನ್ನೇನು ಮಾಡಲಿ? ಎಂದು ಅವನು ತಂದೆ ಸತ್ತದ್ದಕ್ಕಿಂತ ಶವಸಂಸ್ಕಾರಕ್ಕೆ ಬೇಕಾಗುವ ದುಡ್ಡಿನ ಸಲುವಾಗಿ ಘನಘೋರವಾಗಿ ಅತ್ತನು. ಆಗ ಎಪ್ರೀಲತಿಂಗಳವು ಮುಗಿಯುತ್ತ ಬಂದಿತ್ತು. ತಿಂಗಳ ಕೊನೆಗೆ ದುಡ್ಡಿನ ಅಡಚಣೆಯೆಂಬದು ಸರಕಾರೀನೌಕರರ ಹಣೆಯಲ್ಲಿ ಬರೆದ ಮಾತಾಗಿರುವದು. ವಾಸುದೇವರಾಯನು ಬಹುಸರಿಯಾಗಿ ಯೋಚಿಸಿ, ಮೆಲ್ಲಗೆ ಒಳಗೆ ಹೋಗಿ [illegible] ನಗನೇ

ಡಾಗುವ ಪ್ರಸಂಗ ಬಂದಿತಲ್ಲ!'' ಎಂದು ನುಡಿದು ತನ್ನ ಬಡತನದ ಪಂಚಾಂಗವನ್ನು ಓದಿದನು. ಗಂಡನಿಗೊದಗಿದ ಸಂಕಟವನ್ನು ನೋಡಿ ಆ ಸಾಧ್ವಿಯು ಚಡಪಡಿಸಿದಳು. ಇಲ್ಲಿಯವರೆಗೆ ಆ ಸತಿಗೆ ತಮ್ಮ ದಾರಿದ್ರ್ಯಾವಸ್ಥೆಯು ಗೊತ್ತಿದ್ದಿಲ್ಲವೆಂತಲ್ಲ. ಆ ಪುಣ್ಯವಂತಳೇ ನೆಟ್ಟಗಿರುವ ಕಾಲಕ್ಕೆ ತನ್ನ ಮೈಮೇಲೆ ಮಾಡಿಸಿಟ್ಟ ಎಲ್ಲ ಅಲಂಕಾರ ಗಳನ್ನು ಮಾರಿ ಇಂದಿನತನಕ ಸಂಸಾರಶಕಟವನ್ನು ಸಾಗಿಸುತ್ತ ಬಂದಿದ್ದಳು; ಆದರೆ ಈಗ ಮಾವನ ಪ್ರೇತಸಂಸ್ಕಾರಕ್ಕೆ ಏನೂ ಗತಿಯಿಲ್ಲೆಂಬದನ್ನು ಕೇಳಿ ಅವಳಿಗೆ ಅತ್ಯಂತ ವಿಷಾದವಾಯಿತು. ಅವಳು ಕೂಡಲೆ ತನ್ನ ಮೂಗಿನಲ್ಲಿರುವ ನತ್ತನ್ನು ತೆಗೆದು ಗಂಡನ ಕೈಯಲ್ಲಿ ಕೊಡಹೋದಳು. ವಾಸುದೇವರಾಯನು ಮಹಾ ಚಿಂತೆಯಲ್ಲಿ ಮುಳುಗಿದ್ದರೂ ಹೆಂಡತಿಯು ಕೊಡುವ ನತ್ತನ್ನು ಸ್ವೀಕರಿಸಲಿಲ್ಲ. ಆಗ ಅವನು ನುಡಿದನೇನಂದರೆ—''ಪ್ರಿಯೆ, ನಿನ್ನ ಔದಾರ್ಯವನ್ನು ನೋಡಿ ನನಗೆ ಸಮಾಧಾನವೆನಿಸುತ್ತದೆ. ನೀನು ನಿಜವಾಗಿಯೇ ದೊಡ್ಡ ಮನಸ್ಸಿನವಳು; ನಿನ್ನ ಈ ಸದ್ಬುದ್ಧಿಯಿಂದ ನಮ್ಮ ಮನೆತನವು ಇನ್ನೂ ಪ್ರಾಣಧಾರಣಮಾಡಿಕೊಂಡಿದೆ. ಮೂರ್ಖಹೆಂಗಸರು ಮಾತ್ರ ಗಂಡನ ಪ್ರಾಣ ಹೋಗುತ್ತದೆಂದರೂ ತಮ್ಮ ಆಭರಣ ಗಳನ್ನು ಕೊಡಲಾರರು! ನೀನು ನಮ್ಮ ಮನೆತನಕ್ಕೆ ಅನುರೂಪಳಾಗಿ ದೊರೆತದ್ದರಿಂದ ಈ ಬಗ್ಗೆ ನಿನ್ನನ್ನು ಎಷ್ಟು ಶ್ಲಾಘಿಸಿದರೂ ಸ್ವಲ್ಪವೇ ಇರುವದು. ಇರಲಿ; ಆದರೆ ಪ್ರಿಯೇ, ಬೇಡ, ನಿನ್ನ ಸೌಭಾಗ್ಯಾಲಂಕಾರವಾದ ನತ್ತನ್ನು ಕೊಡಬೇಡ. ಅದನ್ನು ಮಾರುವ ಅಧಮತನಕ್ಕೆ ನಾನು ಗುರಿಯಾಗಲಾರೆನು. ಈ ದೇಹದಲ್ಲಿ ಪ್ರಾಣವಿರುವ ವರೆಗೂ ನನ್ನಿಂದ ಆ ಕೆಲಸವಾಗದು!

ಈ ಪ್ರಕಾರ ಮಾತಾಡಿ ಗಂಡನು ಹೊರಗೆ ಹೋಗಿ ಸುಣ ಮೋರೆಮಾಡಿಕೊಂಡು ಕುಳಿತುಕೊಳ್ಳಲು ಪತಿಭಕ್ತಿಪರಾಯಣಳಾದ

ಮಾಲತಿಯು ಕಳವಳಿಸಿ ನಂಬಿಗಸ್ತಳಾದ ತಮ್ಮ ಒಕ್ಕಲಗಿತ್ತಿಯನ್ನು ಕರೆದು—ನತ್ತನ್ನು ಮಾರಿಕೊಂಡು ಬರಲುಹೇಳಿದಳು. ಆದರೆ ಕಡಿಮೆ ಜಾತಿಯ ಜನರಲ್ಲಾದರೂ ತಿಳವಳಿಕೆಯುಳ್ಳವರು ಇರುತ್ತಾರೆಂಬ ದು ಸುಳ್ಳಲ್ಲ. ಒಕ್ಕಲಗಿತ್ತಿಯಾದ ಪಾರ್ವತಿಯು –ಅಮ್ಮನವರೇ, ಇಷ್ಟುದಿನ ನಿಮ್ಮ ಉಪ್ಪನ್ನು ಉಂಡಿರುತ್ತೇನೆ ಈ ಕಾಲಕ್ಕೆ ನಿಮಗೆ ವಿಪತ್ತು ಬಂದಿದ್ದರೂ ಇದು ಮೂರು ದಿನದ ಸಂಕಟ; ಬರ ನೂರು ದಿನ—ಸಾತು ಅನುಗಾಲ; ನನ್ನಿಂದ ಇಷ್ಟು ಸಹ, ಸಹಾಯ ವಾಗಬಾರದೇನು? ಎಂದು ನುಡಿದು ನತ್ತನ್ನು ಇಸಗೊಳ್ಳದೆ ಎಲ್ಲಿಂ ದಲೋ ಸಂಸ್ಕಾರಕ್ಕೆ ಹತ್ತುವಷ್ಟು ರೂಪಾಯಿಗಳನ್ನು ತಂದುಕೊ ಟ್ಟಳು. ವಾಸುದೇವರಾಯನು ಪಾರ್ವತಿಯ ಈ ಸಾಹಸವನ್ನು ಕಂಡು ಸಂತೋಷಹೊಂದಿ —ಪಾರ್ವತೀ, ನಿನ್ನ ಉಪಕಾರಬಹಳ ವಾಯಿತವ್ವಾ! ಆಮರಣ ಈ ಪ್ರಸಂಗವನ್ನು ನಾನು ಮರೆಯುವಹಾ ಗಿಲ್ಲ ಕಂಡಿಯಾ! ಎಂದು ಅವಳನ್ನು ಗೌರವಿಸಿದನು

ಬಳಿಕ ಶಂಕರರಾಯನ ಸ್ಮಶಾನಯಾತ್ರೆಯ ಸಿದ್ಧತೆಯು ತಡವಿಲ್ಲದೆ ಜರಗಿತು ಇನ್ನು ಶವವನ್ನು ಎತ್ತತಕ್ಕವರು! ಅಷ್ಟರಲ್ಲಿ ೧೫-೨೦ ಜನರು ಬಂದು “ಹಾ, ತಡಯಿರಿ; ನಮ್ಮ ಸಾಲವನ್ನು ತೀರಿಸಿದಹೊರತು ಪ್ರೇತವನ್ನು ಎತ್ತಕೂಡದು.’ ಎಂದು ನುಡಿ ಯುತ್ತ ಶಂಕರರಾಯನ ಕಲೇವರದ ಸುತ್ತುವರೆದು ನಿಂತುಕೊಂಡ ರು. ಹಾಯ್! ಹಾಯ್! ಪ್ರಿಯವಾಚಕರೇ, ನೋಡಿದಿರಾ, ಶರೀರ ಭೋಗವನ್ನು! ಸತ್ತು ಮೂರು ದಿನ ಗೆದ್ದಿಲ್ಲವೆಂಬ ನಾಣ್ಣುಡಿಯ ಮರ್ಮವು ಇದೇ ಆಗಿರಬಹುದೇನು? ಡೆಪ್ಯುಟಿಕಲೇಕ್ಟರಹುದ್ದೆಯವ ರೆಗೆ ಪರಿ ಲೌಕಿಕವನ್ನು ಸಂಪಾದಿಸಿದ ಶಂಕರರಾಯನಿಗೆ ಅಂತ್ಯಕಾ ಲದಲ್ಲಿ ಈ ದುರವಸ್ಥೆಯು ಪ್ರಾಪ್ತವಾದದ್ದು ಎಷ್ಟು ಶೋಚನೀ ಯವು! ಹರ! ಹರ! “ಕರ್ಮಣೋಗಹನೋಗತಿಃ’ ಎಂದು ಹೇಳು

ವದು ಅಕ್ಷರಶಃ ನಿಜವಿರುವದು.

ಹೀಗೆ ಆಯುತಸಮಯಕ್ಕೆ ಬಂದು ಪರೀಕ್ಷೆಮಾಡಹತ್ತಿದ ಸಾವುಕಾರರನ್ನು ಕಂಡು ವಾಸುದೇವರಾಯನು ಕೈ ಕಾಲುಗಟ್ಟಿನು. ಅವನ ಮೂವರು ತಮ್ಮಂದಿರು ಮೋರೆಯನ್ನು ಕಳಗೆ ಮಾಡಿದರು. ಆಗ ವಾಸುದೇವರಾಯನು ಸಾವುಕಾರನನ್ನು ಕುರಿತು ದೈನ್ಯೋಕ್ತಿಗಳಿಂದ —ಅಪ್ಪಗಳಿರಾ, ಈ ಕಾಲಕ್ಕೆ ಪ್ರತಿಬಂಧಮಾಡಬೇಡಿರಿ. ಹಿರಿಯರು ದೇಹವಿಟ್ಟು ಆರುತಾಸು ಆಗಿಹೋಗಿರಬಹುದು ನಮ್ಮ ಜನರಲ್ಲಿ ಬಹಳಹೊತ್ತು ಶವವನ್ನು ಮನೆಯಲ್ಲಿಟ್ಟು ಕೊಳ್ಳಲಾಗದೆಂದು ನಿರ್ಬಂಧವಿರುವದು. ಆದ್ದರಿಂದ ಈಗ ನಮ್ಮನ್ನು ಕಾಡಬೇಡಿರಿ. ಈ ಎಲ್ಲ ಕೆಲಸವು ತೀರಿತೆಂದರೆ ನಮ್ಮ ಮನೆಯನ್ನು ಮಾರಿ ಎಲ್ಲರಿಗೂ ಬಂದಷ್ಟು ಹಂಚಿಕೊಡುವೆನು ಈಗ ಮನೆಯಲ್ಲಿ ಹೆಣವನ್ನಿಟ್ಟು ಕೊಂಡು ನಾವು ಹಣಕ್ಕೆ ಯಾರಮನೆಗೆ ಹೋಗೋಣ, ಪ್ರಸಂಗದ ಕಡೆಗೆ ಲಕ್ಷ್ಯಗೊಡಿರಿ. ನಿಮ್ಮ ಹಣವನ್ನು ನಾವು ಮುಳುಗಿಸಿ ಕೊಳ್ಳುವದಿಲ್ಲ, ಎಂದು ಬಹುವಿಧವಾಗಿ ಹೇಳಿಕೊಂಡನು. ಆದರೆ ದ್ರವ್ಯ ಮದಾಂಧರಾದ ಆ ಜನರಿಗೆ ಕರುಣವೆಲ್ಲಿ? ಅವರು —"ಎಷ್ಟು ಹೇಳಿಕೊಂಡರೂ ಕೇಳುವದಿಲ್ಲ; ನಮ್ಮ ಗಂಟು ಇಟ್ಟು ಮುಂದಿನ ಕೆಲಸಮಾಡಿರಿ" ಎಂದು ಖಂಡಿತವಾಗಿ ಹೇಳಿಬಿಟ್ಟರು.

ಸಾಲವೆಂಬುವದು ಶೂಲಕ್ಕೆ ಸಮಾನವಾದದ್ದು; ಉಪವಾಸಬಿದ್ದರೂ ಚಿಂತೆಯಿಲ್ಲ. ಒಬ್ಬರ ಅಳುಕಿನಲ್ಲಿ ಸಿಗುವದು ಹಿತಕರವಲ್ಲ. ಜಗತ್ತೇ ಸ್ವಾರ್ಥದ ಹರಿಗೆ ಬಿದ್ದಿರುವ ಈಗಿನಕಾಲದಲ್ಲಿ ಧನಿಕರು ನಿಷ್ಕಾಂಚನರನ್ನು ಕ್ಷುದ್ರಪದಾರ್ಥವೆಂದು ತಿಳಿದು ಅವರನ್ನು ಮನಸೋಕ್ತವಾಗಿ ಜರಿಯುವದೂ, ಅವರ ಜೀವಹಿಂಡುವದೂ ಆಶ್ಚರ್ಯವಲ್ಲ. ಧನಿಕರಕೈಯಲ್ಲಿ ಸಿಕ್ಕ ಸಾಲಗಾರನು ಹಲವುಬಗೆಯಿಂದ ಅಪಮಾನವನ್ನು ಸಹಿಸಬೇಕಾಗುವದು; ಅವರು ಅಂದದ್ದನ್ನು ಅನಿಸಿಕೊಳ್ಳಬೇ

ಕಾಗುವದು. ಹಾಯ್! ಹಾಯ್! ಋಣಭಾರವನ್ನು ಹೊರಲಾಸಲ್ಲ; ಅದನ್ನು ಹೊತ್ತವರ ಬಾಳು ವ್ಯರ್ಥವಾಗುವದು. ಅದರಂತೆ ಪ್ರಸ್ತುತದಲ್ಲಿ ವಾಸುದೇವರಾಯನಿಗೂ, ಆಯಿತು ಅವನು ಸಾವುಕಾರರ ಕಾಲುಬಿದ್ದು ಹೇಳಿಕೊಂಡನು; ಕೇಳಿಕೊಂಡನು. ಏನು ಮಾಡಿದರೂ ವ್ಯರ್ಥವಾಯಿತು ಅವನು ಆ ಉನ್ಮತ್ತರ ವಾಗ್ಬಾಣಗಳನ್ನು ಸಹಿಸುತ್ತ ಸುಮ್ಮನೆ ಕೂಡ್ರಬೇಕಾಯಿತು ಆಗುತ್ತಾಗುತ್ತ ಒಂಬತ್ತು ತಾಸಾಯಿತು; ಹತ್ತು ತಾಸಾಯಿತು. ಸಾವುಕಾರರು ಶವಸಂಸ್ಕಾರಕ್ಕೆ ಒಪ್ಪಿಗೆಯನ್ನು ಕೊಡಲೊಲ್ಲರು ನೆರೆಮನೆಯವರು ಮಧ್ಯಸ್ಥಿಯನ್ನು ಮಾಡಿನೋಡಿದರು. ಆದರೂ ಬಗೆಹರಿಯದಾಯಿತು.

ಹೊತ್ತು ಅಸ್ತಂಗತನಾಗುತ್ತ ಬಂತು. ವಾಸುದೇವರಾಯನೂ ಅವನ ಮನೆಯವರೂ—ಮುಂದೆ ನಮ್ಮ ಗತಿಯೇನು? ಈ ಸಾವುಕಾರರಿಗೆ ಈಗ ಎಲ್ಲಿಂದ ಹಣಕೊಡಬೋಣ; ಎಂದು ಚಿಂತಿಸುತ್ತಿರಲು, ಹೊರಗಿನಿಂದ ಖಡ್ ಖಡ್ ಎಂದು ಬೂಟುಗಳ ಸಪ್ಪಳವಾಯಿತು ಯಾರು ಬರುವರೆಂದು ಜನರ ಚಿತ್ತವು ಸಹಜವಾಗಿ ಅತ್ತ ಹೊರಳಿತು ಅಷ್ಟರಲ್ಲಿ ಭವ್ಯಶರೀರದ ಒಬ್ಬ ಪುರುಷನು ಒಳಗ ಬಂದನು. ಆತನ ಅವಯವಗಳು ಮಾಟವಲ್ಲದಿದ್ದರೂ ಗಟ್ಟಿಮುಟ್ಟಾಗಿ ತೋರುತ್ತಿದ್ದವು. ಮುಖಮುದ್ರೆಯ ಮೇಲಿಂದ ಆತನಲ್ಲಿ ಸುಜನತನವು ಇರುವದೆಂದು ಸ್ಪಷ್ಟವಾಗಿ ಕಾಣುತ್ತಿತ್ತು. ಅವನು ಹೊಸ್ತಿಲದಲ್ಲಿ ಕಾಲಿಟ್ಟಕೂಡಲೆ "ಹ! ತಡವೇಕೆ? ಹೊತ್ತು ಮುಳುಗುತ್ತ ಬಂದಿತು; ಶವವನ್ನು ಒಯ್ಯುವದಿಲ್ಲವೇ?" ಎಂದು ಗಟ್ಟಿಯಾಗಿ ನುಡಿದನು. ಆತನು ಹೀಗೆ ಅಂದದ್ದನ್ನು ಕೇಳಿ ವಾಸುದೇವರಾಯನು- -ಭೀಮರಾವಜೀ, ನಮ್ಮ ವಿಟಂಬನೆಯು ಅಳತೆಗೆಟ್ಟಿತು. ನಾವು ಬಡವರಾದದ್ದೇ ತಪ್ಪಾಗಿದೆ. ನಮಗೆ (ಪಳೂವರಿ) ಶನಿಮಹಾರಾಯನು ಕೈತೊಳೆದುಕೊಂಡು ಗಂಟುಬಿದ್ದಿರುವನು! ಏನು ಮಾಡಬೋಣ? ಇಲ್ಲಿ

ಕುಳಿತ ಈ ಜನರು ನಮ್ಮ ಸಾವುಕಾರರು; ಸಾಲವನ್ನು ತೀರಿಸಿದ ಹೊರತು ಶವವನ್ನು ಒಯ್ಯಗೊಡುವದಿಲ್ಲವೆನ್ನುತ್ತಾರೆ. ಹಿರಿಯರ ಪುಣ್ಯವು ಹ್ಯಾಗೆ ಅದೆಯೋ ಹಾಗೆ ಆಗಲಿ, ಎಂದು ಔದಾಸೀನ್ಯದಿಂದ ಉತ್ತರ ಕೊಟ್ಟು ನಿಟ್ಟುಸಿರುಬಿಟ್ಟನು

ಭೀಮರಾಯನನ್ನು ಕಂಡಾಗಲೆ ಸಾವುಕಾರರ ಹಸ್ತಾಣವು ಹಾರಿ ಹೋಗಿತ್ತು. ಯಾಕಂದರೆ ಆತನು ಲಕ್ಷಾಧೀಶನಾಗಿದ್ದನು. ಅವನ ಮುಂದೆ ಆ ಸಾವುಕಾರರ ಆಟವು ನಡೆಯುವಹಾಗಿದ್ದಿಲ್ಲ. ಅವರು ಶಾಂತಕ ಮನಸ್ಸಿನಿಂದ ಭೀಮರಾಯನನ್ನು ನೋಡುತ್ತಿರಲು, ಮೇಲೆ ಹೇಳಿದಂತೆ ಆತನು ವಾಸುದೇವರಾಯನ ಮಾತುಗಳನ್ನು ಕೇಳಿ ಸಿಟ್ಟಿನಿಂದ—ಹೂ! ಇವರೇ ಏನು ಸಾವುಕಾರರು? ಇವರದು ಈದಿನವೇನು ಕೆಲಸವಿದೆಯುಂತೆ? ಯಾಕೆ, ನಾಥಾಜಿಮಾರವಾಡಿಯವರೇ, ಸುಮ್ಮನೆ ಇಲ್ಲಿಂದ ಎದ್ದು ಹೋಗುವಿರೋ ಏನೆನ್ನುವಿರಿ? ಎನಲು, ನಾಥಾಜಿಯು ಮುಂದರಿದು ನುಡಿದನೇನಂದರೆ—ನಮ್ಮ ಗಂಟು ಹಾದಿಯಮೇಲೆ ಬಿದ್ದಿಲ್ಲ; ಅದನ್ನು ತೀರಿಸಿದಹೊರತು ನಾವು ಕೂತ ಸ್ಥಳದಿಂದ ಏಳಲಾರೆವು; ಹಾಗು ಶವವನ್ನು ಒಯ್ಯಗೊಡಲಾರೆವು.''

ಮಾರವಾಡಿಯ ಈ ಭಾಷಣವು ಮುಗಿಯುವಷ್ಟರಲ್ಲಿ ಭೀಮರಾಯನ ಮೋರೆಯು ಉಗ್ರವಾಯಿತು ಆವನು ಕುಳಿತ ಆ ಎಲ್ಲ ಜನರನ್ನು ತುಳಿದುಬಿಡುವನೋ ಎಂಬ ಹಾಗೆ ತೋರಿದನು ಅವನ ಆವೇಶವನ್ನು ನೋಡಿ ಆ ಸಾವುಕಾರಜನರು ನಡುಗಹತ್ತಿದರು. ಆತನು ಉರಿಗಣ್ಣಿನಿಂದ ಅವರನ್ನು ನೋಡುತ್ತ ಬಳಿಯಲ್ಲಿ ಬಿದ್ದಿದ್ದ ಒಂದು ಬಿದಿರುಡವಗಿಯ ತುಂಡನ್ನು ತಕ್ಕೊಂಡು—''ತಾಯಿಗಂಡರಾ, ಮುಂದಿಯ ಗೋಣು ಮುರಿಮುರಿದು ಸಾವುಕಾರರಾಗಿ ಈಗ ದೊಡ್ಡ ಜನರ ಅಪಮಾನಮಾಡಬಂದಿರುವಿರಾ?'' ಎಂದು ನುಡಿದು ಕೈಗೆಳಗಿನ ಡೊಣ್ಣೆಯಿಂದ ಮುಖ್ಯಮಾರವಾಡಿಯ ಬೆನ್ನಮೇಲೆ

ಹೊಡೆದನು. ಹೀಗೆ ಭೀಮರಾಯನಿಂದ ಒಂದು ಪೆಟ್ಟು ಬಿದ್ದ ಕೂಡಲೆ ಎಲ್ಲ ಸಾವುಕಾರರು ಅಂಜಿ ಹೇಳದೆ ಕೇಳದೆ ಓಡಿಹೋದರು. ಅವರ ಹಿಂದಿನಿಂದ ಸ್ವಲ್ಪ ಅಂತರದ ಮೇಲೆ ಭೀಮರಾಯನೂ ಓಡಿದನು.

ಭೀಮರಾಯನು ತಿರುಗಿಬಂದಬಳಿಕ ವಾಸುದೇವರಾಯನು-- "ಭೀಮರಾಯ, ಇಂದು ನಮ್ಮ ಮೇಲೆ ನಿಮ್ಮದು ಮಹದುಪಕಾರವಾಯಿತು. ನಾವು ಸಾಯುವವರೆಗೆ ಇದನ್ನು ಮರೆಯಲಾರೆವು. ಈಗ ನೀವು ಬರದಿದ್ದರೆ ನಮ್ಮ ತಂದೆಯ ದಹನಕ್ರಿಯೆಯನ್ನು ಕಾಣುವದು ದುರ್ಲಭವಾಗಿತ್ತು" ಎಂದು ಆತನನ್ನು ಕೊಂಡಾಡಲು, ಭೀಮರಾಯನು ಅದಕ್ಕೆ ಮಹತ್ವವಿಲ್ಲೆಂಬ ಭಾವವನ್ನು ವ್ಯಕ್ತಗೊಳಿಸುತ್ತ ನುಡಿದನೇನಂದರೆ --ಛಿ ಛೀ ವಾಸುದೇವರಾಯ, ಇದೇನು? ಶವವನ್ನು ಎತ್ತುವದಿಲ್ಲವೇ? ಹೂ! ಏಳಿರಿ, ಹೊತ್ತಾಗುವದು!

ಕತ್ತಲೆಯು ಬೀಳತೊಡಗಿತು. ಮೃತಪಟ್ಟ ಶಂಕರರಾಯನ ನಾಲ್ಕುಮಂದಿ ಮಕ್ಕಳು, ಭೀಮರಾಯ, ಇನ್ನೊಬ್ಬ ಆಪ್ತನು ಈ ಆರು ಜನರ ಹೊರತು ಅಲ್ಲಿ ಬೇರೆ ಯಾರೂ ಗಂಡಸರಿದ್ದಿಲ್ಲ. ಅವರಲ್ಲಿಯೂ ವಾಸುದೇವರಾಯನಿಗಿಂತ ಚಿಕ್ಕವನಾದ ಶಿವರಾಯನು ಅಶಕ್ತನಿದ್ದದರಿಂದ ಅವನನ್ನು ಮನೆಯಲ್ಲಿಯೇ ಬಿಟ್ಟು ಉಳಿದವರು ಸ್ಮಶಾನಯಾತ್ರೆಗೆ ಹೊರಟರು. ಅತ್ತ ತುತ್ತ ಅವಸಾನಗೆಟ್ಟು ಬಿದ್ದಿರುವ ಶಂಕರರಾಯನ ಹೆಂಡತಿಗೆ ಗಂಡನ ಶವವನ್ನು ಒಯ್ದದ್ದು ಗೊತ್ತು ಸಹ ಆಗಲಿಲ್ಲ. ಶಂಕರರಾಯನ ಜಡಶರೀರವು ಅಗ್ನಿಮುಖದಲ್ಲಿ ದಗ್ಧವಾಗತೊಡಗಿತು. ಅಂತ್ಯಕಾಲದಲ್ಲಿ ಜ್ಯೇಷ್ಠಪುತ್ರನಿಂದ ಉದಕವನ್ನು ಸೇವಿಸಿ ಪ್ರಾಣಬಿಟ್ಟದ್ದ ಆತನು ಪುಣ್ಯವಂತನಾಗಿ ಸದ್ಗತಿಗೆ ಹೋದನು. ಆದರೆ ಆತನ ಪಶ್ಚಾತ್ ಅವನ ಕುಟುಂಬದವರ ಮೇಲೆ ಜ್ಯೇಷ್ಠಾಲಕ್ಷ್ಮಿಯ ಕೃಪೆಯು ಹೆಚ್ಚುತ್ತ ಹೋಗಿ ಅವರನ್ನು ಬಗೆಬಗೆಯ ದುಃಖಗಳಿಗೆ ಈಡುಮಾಡಿತು.

---

## [ 2 ]

ಕನ್ನಡನಾಡಿನಲ್ಲಿ ಸುಪ್ರಸಿದ್ಧವಾದ ರಾಮಕೋಟೆಯೆಂಬ ಊರಲ್ಲಿ ಶಂಕರರಾಯನ ಮನೆತನವಿತ್ತು. ಅವನು ಡೆಪ್ಯೂಟಿಕಲೆಕ್ಟರ ಕೆಲಸದಿಂದ ಪೆನ್‌ಶನ್ ಪಡೆದವನಾಗಿದ್ದನು. ಆತನು ಸರಕಾರದಲ್ಲಿ ದೊಡ್ಡ ನೌಕರಿಯನ್ನು ಮಾಡಿದ್ದರಿಂದ ಜನರಲ್ಲಿಯೂ, ಸರಕಾರದಲ್ಲಿಯೂ ಆತನಿಗೆ ಗೌರವವು ಚೆನ್ನಾಗಿತ್ತು. ಆದ್ದರಿಂದ ಅವನು ಪ್ರತಿಷ್ಠಿತ ಪುರುಷರಲ್ಲಿ ಎಣಿಸಲ್ಪಡುತ್ತಿದ್ದನೆಂಬದನ್ನು ಬೇರೆ ಹೇಳುವ ಕಾರಣವಿಲ್ಲ ಆತನು ವೈಭವಸಂಪನ್ನನಾಗಿದ್ದನು ಸಂತತಿ-ಸಂಪತ್ತಾದರೂ ತೃಪ್ತಿಕರವಾಗಿತ್ತು. ನಾಲ್ಕುಮಂದಿ ಗಂಡುಮಕ್ಕಳೂ, ನಾಲ್ಕುಮಂದಿ ಹೆಣ್ಣುಮಕ್ಕಳೂ ಅವನನ್ನು ಸಂತೋಷಗೊಳಿಸುತ್ತಿದ್ದರು. 'ಶಂಕರರಾಯನು ಏನು ಪುಣ್ಯವಂತನು!' ಎಂದು ಜನರಿಂದ ಹೊಗಳಿಸಿಕೊಳ್ಳುತ್ತಿದ್ದನು

ಆದರೆ ಈ ಆನಂದವನ್ನು ಕೊನೆಯವರೆಗೆ ಅನುಭವಿಸುವಷ್ಟು ಪುಣ್ಯವು ಮಾತ್ರ ಅವನ ಪದರಿನಲ್ಲಿದ್ದಂತೆ ತೋರಲಿಲ್ಲ. ಅವನು ಪೆನ್‌ಶನ್ ಪಡೆದ ನಾಲ್ಕಾರು ವರ್ಷಗಳಲ್ಲಿಯೇ ಅವನ ಗ್ರಹದಶೆಯು ತಿರುಗಿಹೋಯಿತು. ಒಂದರಮೇಲೊಂದು ಪೆಟ್ಟುಗಳು ಬಡಿಯುತ್ತ ಬಂದು ಅವನ ಆನಂದದಲ್ಲಿ ದುಃಖವು ಬೆರೆಯಹತ್ತಿತು. ಹಿರಿಯ ಮಗಳ ಗಂಡನು ತೀರಿಕೊಂಡನು; ನಡುವಿನಮಗಳನ್ನು ರಾಕ್ಷಸೀ ಕನ್ಯೆಯೆಂದು ಯಾರೂ ಲಗ್ನಮಾಡಿಕೊಳ್ಳದಾದರು; ಮೂರನೇಮಗಳ ಲಗ್ನವು ನಿಶ್ಚಿತವಾಗಿದ್ದು ಮದುವೆಯಮುನ್ನಾದಿನ ಅಳಿಯನು ಕೊಲೆಗಡಕರಿಗೆ ಬಲಿಯಾದನು ಹಾಯ್! ಹಾಯ್! ಶಂಕರರಾಯನ ಹೃದಯವು ಪೂರ್ಣ ದುಃಖಮಯವಾಯಿತು. ಈ ದುಃಖಪರಂಪರೆಗಳಿಂದಲೋ ಅಥವಾ ಶರೀರಭೋಗದಿಂದಲೋ ಆತನಿಗೆ ದುರ್ಧರವಾದದ್ದೊಂದುರೋಗವು ಗಂಟುಬಿದ್ದಿತು. ಬರಬರುತ್ತ ಆತನು ತೀರ

ನೆಲಕಟ್ಟ ಅತ್ತಿತ್ತ ಹೊರಳಾಡಲಿಕ್ಕೆ ಸಹ ಪರಾಧೀನನಾದನು.

ಲಕ್ಷ್ಮಿಯು ಚಂಚಲಳೆಂಬದು ಯಾರಿಗೂ ಅರಿಯದ ಸಂಗತಿಯಲ್ಲ; ಶಂಕರರಾಯನು ಕೈನಡಿಯುವಕಾಲಕ್ಕೆ ಹೇರಳವಾದ ಸಂಪತ್ತನ್ನು ಸಂಪಾದಿಸಿದ್ದನು. ಮೂಲತಃ ಆತನು ದೊಡ್ಡಮನೆತನದವನಾದ್ದರಿಂದ ಹೊಲ-ಮನೆಗಳು ವಿಶೇಷವಾಗಿದ್ದವು ಆದರೆ ಹೋಗುವ ಕಾಲಕ್ಕೆ ಯಾವದೂ ಕೂಡಾಗುವದಿಲ್ಲ ಆತನ ಸರ್ವ ಸಂಪತ್ತೆಲ್ಲ ಇಟ್ಟದ್ದು ಇಟ್ಟಲ್ಲಿಯೇ, ಕೊಟ್ಟದ್ದು ಕೊಟ್ಟಲ್ಲಿಯೇ ಆಗಿ ಮಾಯವಾಯಿತು. ದಾರಿದ್ರ್ಯವು ಮೆಲ್ಲಮೆಲ್ಲನೆ ಮುಂದಡಿಯಿಡತೊಡಗಿತು. ಆಳು-ಹೋಳುಗಳೂ, ದಾಸ-ದಾಸಿಯರೂ ಅವನಿಗೆ ಭಾರವಾಗತೊಡಗಿದರು ತಿಂಗಳಿಗೊಮ್ಮೆ ಎಣಿಸಬೇಕಾದ ನೌಕರರ ಸಂಬಳವು ಮನೆಯವರನ್ನು ತೊಂದರೆಗೆ ಒಳಪಡಿಸಿತು. ತಂದೆಯು ಅಗಾಧವಾದ ಬೇನೆಯಿಂದ ಬಳಲುತ್ತಿದ್ದದರಿಂದ ವಾಸುದೇವರಾಯನು ಮಹಾಚಿಂತೆಗೆ ಒಳಗಾದನು. ಮನೆತನದ ಭಾರವೆಲ್ಲ ಅವನ ಕೊರಳಿಗೆ ಬಿದ್ದುಹೋಗಿತ್ತು. ಚಿಂತೆಮಾಡಿದರೆ ಬಗಿಹರಿಯುವದಿಲ್ಲೆಂಬ ಕಾರಣದಿಂದಲೋ ಅಥವಾ ಇನ್ನಾವ ಕಾರಣದಿಂದಲೋ ಆತನು ಈಚೀಚೆಗೆ ಸಾಂಸಾರಿಕವ್ಯಸನದಿಂದ ಅಲಿಪ್ತನಿರಹತ್ತಿದ್ದನು ಆತನೂ ಆತನ ತಮ್ಮನಾದ ಶಿವರಾಯನೂ ತರುವ ಸಂಬಳವು ಸಂಸಾರಕ್ಕೆ ಸಾಲದಂತಾಯಿತು. ಬರಬರುತ್ತ ಹೊಲ-ಮನೆಗಳು ಸಾವುಕಾರರ ಪಾಲಾದವು; ಹೆಂಗಸರ ಮೈಮೇಲಿನ ಆಭರಣಗಳೂ ಕೈಬಿಟ್ಟವು. ಹೀಗೆ ಸ್ವಲ್ಪ ದಿವಸಗಳ ಪೂರ್ವದಲ್ಲಿ ಗರ್ಭಶ್ರೀಮಂತಿಕೆಯನ್ನು ಅನುಭವಿಸುತ್ತಿದ್ದ ಆ ಕುಟುಂಬದವರು ಈಗ ನಿಕೃಷ್ಟಾವಸ್ಥೆಯನ್ನು ಹೊಂದಿ ಅಸಹ್ಯವಾದ ಚಿಂತೆಗೆ ಒಳಗಾದರು.

ಮನೆಯಲ್ಲಿ ಹೆಂಗಸರು ಜಾಣರಿದ್ದರೆಂದರೆ ಅವರು ಮನೆತನವನ್ನು ಬೈಲಿಗಿಡದೆ ದೇವರು ಕೊಟ್ಟದ್ದರಲ್ಲಿ ಆನಂದದಿಂದ ಸಂಸಾರ

ವನ್ನು ಸಾಗಿಸಿಕೊಂಡು ಹೋಗುತ್ತಾರೆ. ಕೈಮುಟ್ಟಿ ಎಲ್ಲ ಕೆಲಸಗಳನ್ನು ಮಾಡುತ್ತಾರೆ. ಅವರು ಯಾವ ಬಗೆಯ ದುರಭಿಮಾನಕ್ಕೂ ಒಳಗಾಗುವದಿಲ್ಲ. ಇಂಥ ಸುಸಂಗತ ಸಾಂಸಾರಿಕ ಶಿಕ್ಷಣವನ್ನೇ ನಮ್ಮ ಹಿಂದೂಸ್ತ್ರೀಯರಿಗೆ ಕೊಡುವದುಚಿತವಿರುತ್ತದೆ. ನಮ್ಮ ಶಂಕರರಾಯನ ಕುಟುಂಬದಲ್ಲಿಯ ಎಲ್ಲ ಸ್ತ್ರೀಯರು ಇಂಥ ಸುಶಿಕ್ಷಿತರಿದ್ದದರಿಂದ ಅವರು ತಮ್ಮ ಮನೆತನದ ಸ್ಥಿತಿಯನ್ನು ಕುರಿತು ಬಹುವಿಧವಾಗಿ ಯೋಚಿಸಿದರು ಬಳಿಕ ತಾವು ಶ್ರೀಮಂತರಿದ್ದೇವೆಂಬ ದುರಭಿಮಾನವನ್ನು ಬಿಟ್ಟು ತಮ್ಮ ಮನೆಯ ಕೆಲಸಗಳನ್ನು ತಾವೇ ಮಾಡಿಕೊಳ್ಳುವದನ್ನು ನಿರ್ಧರಿಸಿದರು. ಅವರ ಈ ನಿರ್ಧಾರದಿಂದ ಅಡಿಗೆಯ ಆಚಾರಿಯು ಮನೆಬಿಟ್ಟನು; ನೀರಿನವನು ಹೋದನು; ಉಳಿದ ಆಳುಗಳೂ ಕಡಿಮೆಯಾದವು. ಆದರೆ ಪಾರ್ವತಿಯೆಂಬ ದಾಸಿಯು ಮಾತ್ರ ಹೋಗಲಿಲ್ಲ ಅವಳು ಚಿಕ್ಕಂದಿನಲ್ಲಿಯೇ ಶಂಕರರಾಯನ ಪದರಿನಲ್ಲಿದ್ದು ದೊಡ್ಡವಳಾದವಳು. ಆದ್ದರಿಂದ ಆಕೆಯು ಪೂರ್ವದ ಕ್ರಿಯೆಯನ್ನು ಸ್ಮರಿಸಿ, ಅವರ ಕುಟುಂಬದಲ್ಲಿ ಒಬ್ಬಳಾಗಿ ಆಚರಿಸಹತ್ತಿದಳು.

ಈ ಮೇರೆಗೆ ಶಂಕರರಾಯನ ಮನೆತನವು ದಾರಿದ್ರ್ಯಾವಸ್ಥೆಯಲ್ಲಿ ಹೆಚ್ಚು ಹೆಚ್ಚಾಗಿ ಸೇರಿಕೊಳ್ಳುತ್ತಿರಲು, ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ಶಂಕರರಾಯನು ಮರಣಹೊಂದಿದನು. ಬಳಿಕ ಕೇಳುವದೇನು? ಸಾತ್ವಿಕನಾದ ವಾಸುದೇವರಾಯನಮೇಲೆ ಆಕಾಶವು ಕಳಚಿಬಿದ್ದಹಾಗಾಯಿತು. ಕುಟುಂಬದ ಹಿತಚಿಂತಕರೆಲ್ಲರೂ ಗೋಳಿಟ್ಟರು.

ಮನುಷ್ಯನಿಗೆ ಸಂಕಟಗಳು ಬರಹತ್ತಿದವೆಂದರೆ ಒಂದರಹಿಂದೊಂದು ಬಂದೇತೀರುತ್ತವೆ ಇದೊಂದು ಸೃಷ್ಟಿಯ ನಿಯಮವೇ ಆಗಿರುವದೇನೆಂಬ ಸಂಶಯವು ಆ ಅನರ್ಥಗಳನ್ನು ಅನುಭವಿಸಿದವರ ಮನಸ್ಸಿನಲ್ಲಿ ತಟ್ಟನೆ ಒಡಮೂಡುತ್ತದೆ. ಅದರಂತೆ ಶಂಕರರಾಯನ

ಕುಟುಂಬದವರೂ ಆ ನಿಯಮಕ್ಕೆ ಒಳಗಾದರು. ವಾಸುದೇವರಾಯನೇ ಮೊದಲಾದವರು ಶಂಕರರಾಯನ ಶವವನ್ನು ಒಯ್ದ ಬಳಿಕ ಮನೆಯಲ್ಲಿ ಶಿವರಾಯನು, ಆತನ ತಾಯಿಯಾದ ಗಂಗಾಂಬಿಕೆಯು, ಸು-ಲೋಚನೆಯೆಂಬ ವಿಧವೆಯಾದ ತಂಗಿಯು, ಸೌಮಿತ್ರಿಯೆಂಬ ಮ-ತ್ತೊಬ್ಬ ಚಿಕ್ಕತಂಗಿಯು; ಹೀಗೆ ನಾಲ್ವರೇ ಉಳಿದರು. ಒಂದುಮೂಲೆಯಲ್ಲಿ ದೀಪವು ಮಿಣುಮಿಣುಕಾಗಿ ಉರಿಯುತ್ತಲಿತ್ತು. ಅಶಕ್ತನಾದ ಶಿವರಾಯನು ಒಂದುಕಡೆ ಮಲಗಿದ್ದನು ಸುಲೋಚನೆ-ಸೌಮಿತ್ರಿಯರು ತಾಯಿಯ ಹತ್ತರ ಕುಳಿತಿದ್ದರು ಅವರು ಮೂಕಭಾವದಿಂದ ಒಬ್ಬರನ್ನೊಬ್ಬರು ನೋಡುತ್ತಿದ್ದರು. ಮಾತಾಡಬೇಕೆಂಬ ಇಚ್ಛೆಯು ಯಾರಲ್ಲಿಯೂ ಇದ್ದಿಲ್ಲ.

ಹೀಗೆ ಆ ದುಃಖಿತ ಪರಿವಾರವು ಮೌನವಾಗಿ ಕುಳಿತಿರಲು, ನಾಲ್ಕುಜನ ಪೋಲೀಸರು ಅವರ ಮನೆಯನ್ನು ಮುತ್ತಿದರು ಅವರಲ್ಲಿ ಒಬ್ಬ ಮುಖ್ಯಮನುಷ್ಯನು 'ಶಿವರಾವ ಶಿವರಾವ' ಎಂದು ಒದರುತ್ತ ಪಡಸಾಲೆಯ ಮೇಲೆ ಬಂದು ನಿಂತನು. ಆತನ ಕರಿಯ ಬಣ್ಣದ ಪೋಷಾಕು, ಮಿರಿಮಿರಿ ಮಿಂಚುವ ಬೂಟುಗಳು, ಉಗ್ರವಾಗಿ ತೋರುವ ಮುಖಮುದ್ರೆ ಇವುಗಳನ್ನು ನೋಡಿ ಭಯಗ್ರಸ್ತನಾದ ಶಿವರಾಯನು ಎದ್ದು ಕುಳಿತನು. ಆತನನ್ನು ನೋಡಿದಕೂಡಲೆ ಆ ಜಮಾದಾರನು ಶಿವರಾಯನನ್ನು ದಸ್ತಗೀರು ಮಾಡಿದನು. ಕೂಡಲೆ ಗಂಗಾಂಬಿಗೆಯು ಚಿಟ್ಟನೆ ಚೀರಿದಳು. ಆಕೆಯ ಸ್ವರವು ಒಮ್ಮೆ ಮೇಲೆ ಹೋದದ್ದು ಹೋಗಿಬಿಟ್ಟಿತು. ಮಗನ ಮುಂದಿನ ಪರಿಣಾಮವನ್ನು ನೋಡಲಿಕ್ಕೆ ಅವಳು ಬದುಕಿ ಉಳಿಯಲಿಲ್ಲ. ಈ ಹೃದಯದ್ರಾವಕ ಪ್ರಸಂಗವನ್ನು ನೋಡಿ ಸುಲೋಚನೆಯು ಬೆದರಿದಳು ಆಕೆಯು ಒಮ್ಮೆಲೆ—ಹಾಯ್! ದೈವವೇ, ಈ ಹತಭಾಗಿನಿಗೆ ತಾಯಿಯನ್ನೂ ನೀಗಲಾಡಿದೆಯಾ? ಎಂದು ಹಂಬಲಿಸಲಾರಂಭಿಸಿದಳು.

ಆಕೆಯ ಶೋಕವೇಗವನ್ನು ನೋಡಿ ಶಿವರಾಯನ ಕೈ-ಕಾಲುಗಳು ತಣ್ಣಗಾದವು. ಬಹಳ ಹೇಳುವದೇನು? ಪಾಷಾಣದಂತಿರುವ ಪೋಲೀಸರ ಹೃದಯವು ಕೂಡ ಕರಗಿತು. ಜಮಾದಾರನು ಒಂದು ಕ್ಷಣ ಗೊಂದಲದಲ್ಲಿ ಬಿದ್ದನು. ಆತನು ದಯಾಯುಕ್ತನಾಗಿ ಸುಲೋಚನೆಯು ಹಾಡಾಡಿಕೊಂಡು ಅಳುವದನ್ನು ಕೇಳುತ್ತಿರಲು, ಆ ಮನೆತನದವರಮೇಲೆ ಬಂದ ಪ್ರಸಂಗವು ತಟ್ಟನೆ ಆತನ ಕಣ್ಣಿಗೆ ಕಟ್ಟಿತು. ಇಂಥ ಸಮಯದಲ್ಲಿ ತಾನು ಎಂಥ ದುಃಖಕೊಟ್ಟೆನೆಂಬ ಪಶ್ಚಾತ್ತಾಪವು ಆತನಿಗೆ ಆಯಿತು. ಆದರೆ ಇದೆಲ್ಲ ಎಷ್ಟು ಹೊತ್ತು? ತಾನು ಯಾರು? ಇಲ್ಲಿಗೆ ಯಾಕೆ ಬಂದಿರುವೆನೆಂಬ ಸ್ಮರಣವು ಆದಕೂಡಲೆ ಅವನ ದಯೆಯು ಮಾಯವಾಯಿತು. ನಾನು ಜಮಾದಾರನಿದ್ದು, ಮಹಸ್ಮರ ಅಪ್ಪಣೆಯಂತೆ ಅಪರಾಧಿಯನ್ನು ಹಿಡಿಯದಿದ್ದರೆ, ಮನೆಗೆ ಹೋಗಬೇಕಾದೀತೆಂಬ ಭಯವು ಅವನನ್ನು ಆವರಿಸಿತು ಆಗ ಆತನು ಶಿವರಾಯನಿಗೆ ತನ್ನ ಬಳಿಯಲ್ಲಿದ್ದ ವಾರಂಟನ್ನು ತೋರಿಸಿ, ನಮ್ಮ ಸಂಗಡ ಮ್ಯಾಜಿಸ್ಟ್ರೇಟರ ಕೋರ್ಟಿಗೆ ನಡೆಯಬೇಕೆಂದು ಹೇಳಿದನು. ಅದನ್ನು ಕೇಳಿ ಶಿವರಾಯನು ಥರ ಥರ ನಡುಗುತ್ತಿರಲು, ಸುಲೋಚನೆಯು ಅಣ್ಣನನ್ನು ಒಯ್ದೊಯ್ಯುವರೆಂಬದನ್ನು ತಿಳಿದು ಮತ್ತಷ್ಟು ಶೋಕಾಕುಲಳಾದಳು ಹೀಗೆ ಆಕೆಯು ದುಃಖಪರಂಪರೆಗಳಿಂದ ಹೆಚ್ಚು ಹೆಚ್ಚು ಹೈರಾಣಾಗುತ್ತ ಜಮಾದಾರನನ್ನು ಕುರಿತು ನುಡಿದಳೇನಂದರೆ—"ಅಪ್ಪಗಳಿರಾ, ನಮ್ಮಣ್ಣನನ್ನು ಎಲ್ಲಿಗೆ ಎಳೆದೊಯ್ಯುವಿರಿ?" ಹಾಯ್! ತಂದೆಯವರೇ, ಈ ಕಾಲಕ್ಕೆ ನೀವು ಎಲ್ಲಿಗೆ ಹೋಗಿರುವಿರಿ? ನಿಮ್ಮ ಪ್ರೀತಿಯ ಪುತ್ರರ ಅವಸ್ಥೆಯು ಏನಾಗಿರುವದೆಂಬದನ್ನು ನೋಡುವದಿಲ್ಲವೇ? ಹರ! ಹರ!

ಸುಲೋಚನೆಯ ಈ ಶೋಕವನ್ನು ನೋಡಿ ಜಮಾದಾರನು ಶಾಂತಸ್ವರದಿಂದ—ಬಾಯಿಾ, ಹೀಗೆ ಅತ್ತರೆ ಆಗುವ ಪ್ರಯೋಜನ

ವೇನು? ನಾವು ಸರಕಾರಿಯನೌಕರರು; ನಮ್ಮ ಬಳಿಯಲ್ಲಿ ವಾರಂಟು ಇದ್ದು, ನಿಮ್ಮಣ್ಣನನ್ನು ಹಿಡಿದೊಯ್ಯಲೇಬೇಕಾಗಿದೆ; ಎಂದು ನುಡಿದು, ಶಿವರಾಯನ ಕಡೆಗೆ ಹೊರಳಿ---ಬೇಗನೆ ಹೊರಡಿರಿ, ತಡಮಾಡುವಹಾಗಿಲ್ಲ, ಎಂದು ಅಂದನು. ಆಗ—

ಶಿವರಾಯನು(ದೈನ್ಯದಿಂದ) —ಜಮಾದಾರಸಾಹೇಬ, ನಾನು ನಿಮ್ಮ ಸಂಗಡ ಬರುವೆನು; ಆದರೆ ಸ್ಮಶಾನಕ್ಕೆಹೋದ ನಮ್ಮ ಅಣ್ಣಂದಿರು ಬರುವವರೆಗೆ ಮಾತ್ರ ಸ್ವಲ್ಪ ಅವಕಾಶ ಕೊಡಬೇಕು. ಇಷ್ಟೇ ನನ್ನ ಪ್ರಾರ್ಥನೆಯು.

ಜಮಾದಾರ (ಸಿಟ್ಟಿನಿಂದ) —ಛೇ, ಆ ಮಾತು ಆಗದು. ನಾವು ಬಂದು ಎರಡು ತಾಸಾಯಿತು. ಇನ್ನೂ ತಡೆಯಿರೆನ್ನಲಿಕ್ಕೆ ನಾಚಿಕೆ ಬರುವದಿಲ್ಲವೇ?

ಶಿವರಾಯನು — ಜಮಾದಾರಸಾಹೇಬ. ಸ್ವಲ್ಪ ದಯವಿರಲಿ; ನಾವು ಈಗ ಎಂಥ ಸಂಕಟದಲ್ಲಿ ಬಿದ್ದಿರುವೆವೆಂಬದನ್ನು ಕಣ್ಮುಟ್ಟಿ ನೋಡುತ್ತೀರಿ. ತಂದೆಯವರ ಶವಸಂಸ್ಕಾರಕ್ಕೆ ಹೋದವರು ಇನ್ನೂ ಬಂದಿಲ್ಲ ಸದ್ಯಕ್ಕೆ ಮನೆಯಲ್ಲಿ ತಾಯಿಯವರ ಶವವು ಬಿದ್ದುಕೊಂಡಿರುವದು. ಈ ಹೆಣವನ್ನೂ, ಈ ಇಬ್ಬರು ಹೆಂಗಸರನ್ನೂ ಬಿಟ್ಟುಕೊಟ್ಟು ನಾನು ಈ ರಾತ್ರಿಯ ಹೊತ್ತಿನಲ್ಲಿ ಹ್ಯಾಗೆ ಹೊರಡಲಿ? ಸಾಹೇಬ, ನಿಮಗಾದರೂ ಸಂಸಾರವಿರುವದು, ಮಕ್ಕಳು-ಮರಿಗಳು ಇರಬಹುದು. ನಾನು ನಿಮ್ಮ ಸರಕಾರೀ ಹುಕುಮಿಗೆ ಅಮಾನ್ಯ ಮಾಡುವದಿಲ್ಲ ಮಾತ್ರ ಮನೆಯಲ್ಲಿ ಯಾರಾದರೂ ಬರುವವರೆಗೆ ಅವಕಾಶವನ್ನು ಕೇಳಿಕೊಳ್ಳುತ್ತೇನೆ.

ಜಮಾದಾರ —ಇಲ್ಲ; ಇಲ್ಲ; ಮನನ್ನೂ ಕೇಳುವದಿಲ್ಲ. ನಿಮ್ಮ ಸಲುವಾಗಿ ನಾವು ಸಂಕಟದಲ್ಲಿ ಬೀಳಬೇಕಾದೀತು. ಸಾಕುಮಾಡಿರಿ, ನಿಮ್ಮ ಈ ಸೋಗನ್ನು!

ಈ ಪ್ರಕಾರ ಜಮಾದಾರನು ನುಡಿದು, ತನ್ನ ಸಿಪಾಯಿಗಳ ಮೋರೆಯನ್ನು ನೋಡಿದನು. ಕೂಡಲೆ ಆ ಕಾಳದೂತರು ಮುಂದರಿದು ಶಿವರಾಯನನ್ನು ಹಿಡಿದರು; ಮತ್ತು ಆತನ ಎರಡೂ ರಟ್ಟೆಗಳಿಗೆ ಹಗ್ಗವನ್ನು ಕಟ್ಟಲಾರಂಭಿಸಿದರು ಆಗ ಶಿವರಾಯನು ಭಯದಿಂದ ತ್ರಸ್ತನಾದನು. ಆವನು ಅತ್ಯಂತ ದೈನ್ಯದಿಂದ—"ಇದೇನು? ಹಾಯ್! ಹಾಯ್! ಜಮಾದಾರಸಾಹೇಬರೇ, ನನ್ನನ್ನು ಮಾನಗೇಡು ಮಾಡಬೇಡಿರಿ. ನಾನು ಬರುತ್ತೇನೆ" ಎಂದು ನುಡಿಯುತ್ತ ಎದ್ದು ನಿಂತನು ಅದನ್ನು ಕಂಡು ಸುಲೋಚನೆ-ಸೌಮಿತ್ರಿಯರು ಓಡಿ ಬಂದು ಶಿವರಾಯನಿಗೆ ತೆಕ್ಕೆಬಿದ್ದು—"ಅಪ್ಪಗಳಿರಾ, ಸ್ವಲ್ಪ ತಡೆಯಿರಿ, ತಡೆಯಿರಿ. ನಮ್ಮಣ್ಣನನ್ನು ಹೀಗೇಕೆ ಬಿಗಿಯುವಿರಿ?" ಎಂದು ದೈನ್ಯೋಕ್ತಿಗಳಿಂದ ಪೋಲೀಸರನ್ನು ಕೇಳಲಾರಂಭಿಸಿದರು

ಪೋಲೀಸರು ಸುಲೋಚನೆಯನ್ನು ಹಿಂದಕ್ಕೆ ದೂಡಲುಪಕ್ರಮಿಸಿದರು. ತರುಣಿಯಾದ ಅವಳು ಪರಪುರುಷರ ಹಸ್ತಸ್ಪರ್ಶಕ್ಕೆ ಅಂಜಿ, ಅಣ್ಣನನ್ನು ಬಿಟ್ಟು ಕಡೆಗಾದಳು. ಆದರೆ ಸಣ್ಣವಳಾದ ಸೌಮಿತ್ರಿಯು ಮಾತ್ರ ಶಿವರಾಯನ ಕೊರಳಿಗೆ ಗಟ್ಟಿಯಾಗಿ ತೆಕ್ಕೆಬಿದ್ದಳು. ಪೋಲೀಸರು ಆಕೆಯನ್ನು ಹಿಂದಕ್ಕೆ ದೂಡಬೇಕೆಂದು ವಿಶ್ವಪ್ರಯತ್ನ ಮಾಡಿದರೂ ಅವಳು ಅಣ್ಣನ ಕೊರಳನ್ನು ಬಿಡಲಿಲ್ಲ. ಆಗ ಆಕೆಯ ಸ್ಥಿತಿಯು ಅತ್ಯಂತ ಕಾರುಣ್ಯಾಸ್ಪದವಾಗಿತ್ತು. ಮುಡಿಯಿಂದ ಮುಕ್ತವಾದ ಅವಳ ಕೇಶಕಲಾಪಗಳು ಬೆನ್ನಮೇಲೆ ಅಸ್ತವ್ಯಸ್ತವಾಗಿ ಬಿದ್ದಿದ್ದವು. ಸೀರೆಯ ಸೆರಗು ಕಳಚಿದ್ದರಿಂದ ಅದೇ ದುಂಡಗಾಗುತ್ತ ನಡೆದಿದ್ದ ಕುಚಪ್ರದೇಶಗಳು ನಿಚ್ಚಳವಾಗಿ ಕಾಣುತ್ತಿದ್ದವು. ವಿಶಾಲವಾದ ನೇತ್ರಗಳು ಅಶ್ರುಗಳಿಂದ ಪರಿಪೂರ್ಣವಾಗಿದ್ದವು ಮುಖವು ಬಾಡಿತ್ತು. ಅವಳ ಕಣ್ಣನ್ನು ಒರೆಸುವದಕ್ಕೋ ಎಂಬಂತೆ ಹುಬ್ಬುಗಳು ಬಾಗಿದ್ದವು. ಅವಳ ಕಾಲುಗಳು ನಡುಗು

ತ್ತಿದ್ದವು. ಅವಳು ಈಪರಿ ಭಯಗ್ರಸ್ತಳಾಗಿದ್ದರೂ, ಪೋಲೀಸರು ಎಷ್ಟು ಪ್ರಯತ್ನಪಟ್ಟರೂ ಅಣ್ಣನ ಕೊರಳನ್ನು ಬಿಡಬಾರದೆಂದು ಅವಳು ನಿಶ್ಚಯಿಸಿದಂತೆ ಕಂಡುಬರುತ್ತಿತ್ತು. ಇಂಥ ಸ್ಥಿತಿಯಲ್ಲಿದ್ದ ಆಕೆಯನ್ನು ಕಾಣುವ ಪ್ರತಿಯೊಬ್ಬನಲ್ಲಿ ದಯೆಯು ಉತ್ಪನ್ನವಾಗದೆ ಇರುತ್ತಿದ್ದಿಲ್ಲ. ಆದರೆ ನಿಷ್ಕರುಣರಾದ ಪೋಲೀಸರಿಗೆ ದಯವೆಲ್ಲಿ? ಅವರು ಕೇವಲ ಯಮದೂತರಿಗೆ ಸಮಾನರು. ಆ ಕೋಮಲೆಯ ಆರ್ತಸ್ವರದಿಂದ ಅವರಲ್ಲಿ ದಯೆಯು ದ್ರವಿಸಲಿಲ್ಲ. ಅವರು ಅತ್ಯಂತ ನೈಷ್ಠುರ್ಯದಿಂದ ಸೌಮಿತ್ರಿಯನ್ನುಹಿಡಿದೆಳೆಯಹತ್ತಿದರು. ಒಬ್ಬನು ಅವಳ ಸೆರಗನ್ನು ಹಿಡಿದಿದ್ದನು; ಇನ್ನೊಬ್ಬನು ಆಕೆಯ ಬಗಲಲ್ಲಿ ಕೈ ಹಾಕಿದ್ದನು. ಮತ್ತೊಬ್ಬನು ಶಿವರಾಯನ ಕೊರಳಿಗೆ ಹಾಕಿದ ಅವಳ ಕೈಸುತ್ತನ್ನು ಬಿಡಿಸುತ್ತಿದ್ದನು

ಈ ವೇಳೆಗೆ ಆ ಯಮದೂತರು ಆ ಮನೆಯಲ್ಲಿ ಗೊಂದಲವನ್ನೆಬ್ಬಿಸಿರಲು, ಅಷ್ಟರಲ್ಲಿ ಮನೆಯ ಹೊರಗಿನಿಂದ "ಎಲೋ ಮೂರ್ಖರೇ, ಹುಡುಗೆಯ ಮೈ ಮುಟ್ಟುವ ಅಧಮರು ನೀವು ಯಾರಿರುವಿರಿ? ' ಎಂದು ಕೂಗುತ್ತ ಒಬ್ಬ ಗೃಹಸ್ಥನು ಒಳಗೆ ಬಂದು ಪೋಲೀಸರನ್ನು ಮೈಮುರಿ ಥಳಿಸಿ, ಹಿಂದಕ್ಕೆ ದಬ್ಬಿಕೊಟ್ಟನು. ಈ ಅಕಸ್ಮಿಕ ಪ್ರಸಂಗದಿಂದ ಅವರು ಅವಸಾನಗೆಟ್ಟು ನಿಂತುಕೊಂಡರು. ಆಗ ಶಿವರಾಯನು ಮೋರೆಯನ್ನು ಮೇಲಕ್ಕೆತ್ತಲು, ಈ ಪ್ರಕಾರ ಪೌರುಷಮಾಡಿದ ಗೃಹಸ್ಥನು ಬೇರೆ ಯಾವನೂ ಆಗಿರದೆ ವಾಚಕರ ಪರಿಚಯಸ್ಥನಾದ ಭೀಮರಾಯನೇ ಆಗಿದ್ದನು ಆತನ ಹಿಂದಿನಿಂದ ಸ್ಮಶಾನಕ್ಕೆ ಹೋದ ವಾಸುದೇವರಾಯನೇ ಮೊದಲಾದ ಎಲ್ಲ ಜನರೂ ಮನೆಯನ್ನು ಹೊಕ್ಕರು.

ಹೀಗೆ ಮನೆಯಲ್ಲಿ ಜನಸ್ತೋಮವು ಹೆಚ್ಚುತ್ತ ನಡೆಯಲು, ಭೀಮರಾಯನಿಂದ ಪೆಟ್ಟುತಿಂದ ಪೋಲೀಸರು ಆವೇಶಗೊಳ್ಳಹತ್ತಿ

ದರು; ಅವರಲ್ಲಿ ಒಬ್ಬನು ಸಂತಾಪದಿಂದ ಭೀಮರಾಯನ ಮೇಲೆ ಏರಿಬಂದನು ಆದರೆ ನಾಲ್ಕೆಂಟು ಜನರು ಒಮ್ಮೆಲೇ ಮೈಮೇಲೆ ಬಂದರೂ ನೋಡಿಕೊಳ್ಳುವಷ್ಟು ಸಾಮರ್ಥ್ಯವುಳ್ಳ ಆತನು ಆ ಪೋಲೀಸನ ಸೋಟೆಯನ್ನು ಹಿಡಿದು ತಿರುವಿ ಒಗೆಯಲು ಅವನು ಹತ್ತುಮೊಳ ಅಂತರದಮೇಲೆ ಸಿಡಿದುಬಿದ್ದನು. ಆಗ ಭೀಮರಾಯನು ಗದ್ದರಿಸಿ -ಮೂರ್ಖರಿರಾ. ನಾನು ಯಾರೆಂಬದು ನಿಮಗೆ ಗೊತ್ತಿಲ್ಲವೇ? ನಡೆಯಿರಿ ನಾನೂ ನಿಮ್ಮ ಸಂಗಡ ಚಾವಡಿಗೆ ಬರುವೆನು, ಎಂದು ನುಡಿದನು.

ಈ ಅನರ್ಥವನ್ನು ನೋಡಿ ಮೊದಲೇ ಅಪರಾಧಿಯಾಗಿದ್ದ ಶಿವರಾಯನು ಅಂಜಿ—ಭೀಮರಾಯರೇ, ಸಮಾಧಾನ ತಾಳಿರಿ, ಎನಲು, ಕ್ರೋಧಸಂತಪ್ತನಾಗಿದ್ದ ಆತನು— ಏನು ಸಮಾಧಾನ ತಾಳೆನ್ನುತ್ತೀರಿ. ಈ ನೀಚರು ಸಭ್ಯಗೃಹಸ್ಥರ ಮನೆಯೊಳಗಿನ ಸುಶೀಲಸ್ತ್ರೀಯರ ಮೇಲೆ ಕೈಮಾಡಬಹುದೇ? ಇವರಿಗೆ ಯಾವ ಕಾಯಿದೆಯಿಂದ ಈ ಅಧಿಕಾರವಿರುವದೆಂಬದನ್ನು ನಾನೇ ಮ್ಯಾಜಿಸ್ಟ್ರೇಟರನ್ನು ಕೇಳುತ್ತೇನೆ, ಎಂದು ನುಡಿದು, ಶಿವರಾಯನನ್ನು ಸುಮ್ಮನಿರಿಸಿದನು. ಬಳಿಕ ಜಮಾದಾರನು ಒಳ್ಳೇಮಾತಿನಿಂದ ಶಿವರಾಯನಿಗೆ ಚಾವಡಿಗೆ ನಡೆಯ ಹೇಳಲು, ಆತನು ಪೋಲೀಸರ ಬೆನ್ನು ಹತ್ತಿ ನಡೆದನು. ಭೀಮರಾಯನ ಹೆದರಿಕೆಯಿಂದ ಪೋಲೀಸರು ಶಿವರಾಯನ ರಟ್ಟೆಗೆ ಹಗ್ಗಹಚ್ಚಲಿಲ್ಲ. ಆಗ ವಾಸುದೇವರಾಯನು ತಮ್ಮನ ಜೋಡಿಗೆ ಚಾವಡಿಗೆ ಹೋಗುವದಕ್ಕಾಗಿ ಮುಂದರಿಯಲು, ಭೀಮರಾಯನು ಅವನಿಗೆ ಸಿಟ್ಟುಮಾಡಿ ಅವನನ್ನು ಮನೆಗೆ ಕಳಿಸಿ ತಾನೇ ಚಾವಡಿಗೆ ನಡೆದನು.

---

[ 3 ]

ಪ್ರಾತಃಕಾಲದ ಸಮಯವು; ಸುಖಪ್ರದವಾದ ತಂಗಾಳಿಯು ಸುಳಿದಾಡುತ್ತಿದೆ; ಮುಖಮಾರ್ಜನಾದಿ ಪ್ರಾತರ್ವಿಧಿಗಳನ್ನು ತೀರಿಸಿಕೊಂಡಿದ್ದ ಕಾಲಿಂದಿಯು ದಿವಾಣಖಾನೆಗೆ ಬಂದು ತಮ್ಮ ದಿವಾಣನನ್ನು ಕುರಿತು ಒಳ್ಳೇ ದರ್ಪದಿಂದ—"ಏನು! ನೀವು ಅಫುವನ್ನು ತಿನ್ನುತ್ತೀರೋ ಅಥವಾ ಭಂಗಿಯನ್ನು ಮುಕ್ಕುತ್ತೀರೋ? ನಿಮಗೆ ವೈವೋಲೆ ಎಚ್ಚರವಿರುವದಿಲ್ಲೆಂಬಂತೆ ತೋರುತ್ತದೆ. ಹಗಲುಹನ್ನೆರಡು ತಾಸುಗಳವರೆಗೆ ಸುಮ್ಮನೆ ಲೋಡಿಗೆ ಆತು ಕುಳಿತು ಸಂಬಳವನ್ನು ಬೇಡಲಿಕ್ಕೆಮಾತ್ರ ಜಾಣರಿರುತ್ತೀರಿ ನಾಚಿಕೆ ಬರುವದಿಲ್ಲವೇ ಮೋರೆಯನ್ನು ಮೇಲಕ್ಕೆತ್ತಲಿಕ್ಕೆ!" ಎಂದು ಗದ್ದರಿಸಿದಳು. ತಮ್ಮ ಯಜಮಾನತಿಯ ಸ್ವಭಾವವನ್ನು ಪೂರ್ಣ ಬಲ್ಲವನಾದ್ದರಿಂದ ದಿವಾಣನು ಆಕೆಯ ಮಾತುಗಳಿಗೆ ಬೆದರದೆ ಆಕೆಯನ್ನು ಕುರಿತು—

ದಿವಾಣ—ಅವ್ವನವರೇ, ನೀವು ಏನು ಅನ್ನುವಿರೆಂಬದು ನನ್ನ ತಲೆಯಲ್ಲಿಯೇ ಸೇರಲೊಲ್ಲದು.

ಕಾಲಿಂದಿ—ಹ್ಯಾಗೆ ಸೇರೀತು? ತಿಂಗಳಿಗೊಮ್ಮೆ ಕೈತುಂಬ ಸಿಗುವ ಸಂಬಳವು ಕಟ್ಟಾದರೆ ಮಾತ್ರ ಸೊಂಡೆಯು ಒಣಗುವದು. ಆದರೆ ನಿಮಗೆ ಇದೊಂದುಸಾರೆ ಖಂಡಿತವಾಗಿ ಹೇಳುತ್ತೇನೆ. ಇನ್ನು ಮುಂದೆ ನೀವು ಹೀಗೆ ನಿಷ್ಕಾಳಜಿಯಿಂದ ಕೆಲಸಮಾಡಿದರೆ ನಿಮ್ಮನ್ನು ಅರಕ್ಷಣಸಹ ಮನೆಯಲ್ಲಿ ಇಟ್ಟುಕೊಳ್ಳಲಿಕ್ಕಿಲ್ಲ. ಇದನ್ನು ಲಕ್ಷದಲ್ಲಿಟ್ಟುಕೊಂಡು ಕೆಲಸಮಾಡಿರಿ ಮಾತ್ರ.

ದಿವಾಣ—ತಾಯಿಯವರೇ ಈಗ ಆದದ್ದಾದರೂ ಏನು?

ಕಾಲಿಂದಿ—ನಿಮ್ಮ ತಲೆ! ನಿನ್ನೆ ರಾತ್ರಿಯಲ್ಲಿ ಭೀಮೂನನ್ನು ಹಿಡಕೊಂಡು ಚಾವಡಿಗೆ ಯಾರು ಒಯ್ದರು? ಅವನು ಯಾರ ಮಗನೆಂಬದು ಗೊತ್ತಿಲ್ಲವೇ?

ದಿವಾಣ—ಓಹೋ! ಹೀಗೇನು? ಈ ಸಂಗತಿಯನ್ನು ನಾನು ಈಗ ನಿಮ್ಮ ಬಾಯಿಯಿಂದಲೇ ಕೇಳಿದ್ದು; ಅವ್ವನವರೇ, ಚಿಂತೆಯನ್ನು ಮಾಡಬೇಡಿರಿ. ನಾನು ಈಗಿಂದೀಗಲೆ ಹೋಗಿ ಆತನನ್ನು ಬಿಡಿಸಿಕೊಂಡು ಬರುತ್ತೇನೆ. ಇಷ್ಟು ಮಾತಾಡಿ ದಿವಾಣನು ಹೊರಟು ಹೋದನು

ಇದೇ ಸಮಯದಲ್ಲಿ ಶಯನಾಗಾರದಿಂದ ಮಾಧವನು ಕಣ್ಣನ್ನು ತಿಕ್ಕಿಕೊಳ್ಳುತ್ತ ಹೊರಗೆ ಬಂದನು ಅವನನ್ನು ಕಂಡು ಕಾಲಿಂದಿಯು —ತಮ್ಮಾ, ಮಾಧವಾ, ಭೀಮನನ್ನು ಯಾರೋ ಚಾವಡಿಗೆ ಹಿಡಿದುಕೊಂಡು ಹೋದರಂತೆ ಕೇಳುತ್ತೇನೆ, ಎಂದು ನುಡಿಯಲು ಅದನ್ನು ಕೇಳಿ—

ಮಾಧವನು —ಬಹಳ ನೆಟ್ಟಗಾಯಿತು. ಈ ರಾಜಶ್ರೀಯವರಿಗೇ ನಮ್ಮ ಕುಲದೀಪಕರೆನ್ನಬೇಕು. ಈಗೇನು ವರಹದಲ್ಲಿ ದುರ್ಗ್ಗಾಣೆಯನ್ನು ಬಳಸಿದಂತಾಗಿರುವದಿಲ್ಲ. ಇಂದು ಚಾವಡಿಯನ್ನು ಕಂಡರೆ ನಾಳಿಗೆ ಕಾರಾಗೃಹವನ್ನು ಸಹ ಕಂಡಾನು!

ಮಾಧವನ ಈ ಮಾತುಗಳನ್ನು ಕೇಳಿ ಕಾಲಿಂದಿಯು ತುಪ್ಪ ಸುರುಪಿದ ಬೆಂಕಿಯಂತೆ ಅತ್ಯುಗ್ರಳಾದಳು. ಆಕೆಯು ಅತ್ಯಂತಸಂತಾಪದಿಂದ—ಚಾಂಡಾಲಾ, ನೀನು ಯಾರವನು? ಭೀಮನು ನಿನಗೇನೂ ಸಂಬಂಧಿಕನಲ್ಲವೆ? ನೀವೆಲ್ಲರೂ ವೈರಿಗಳಂತೆ ಆತನನ್ನು ಕಾಣುತ್ತೀರಿ. ಆದರೆ ನೀವು ಭೀಮನನ್ನು ಬಿಡಿಸಿಕೊಂಡು ಬರದಿದ್ದರೆ ನಾನು ಪ್ರಾಣವನ್ನು ಇಡಲಿಕ್ಕಿಲ್ಲ; ಎಂದು ನುಡಿದಳು. ಮಾಧವನು ತಾಯಿಯ ಈ ಮಾತನ್ನು ಲಕ್ಷಿಸದೆ ಪಡಸಾಲೆಯ ಕಡೆಗೆ ಹೊರಟು ಹೋದನು. ಮತ್ತು ಅಲ್ಲಿ ಶ್ರೀಪತಿಯು ಮುಂದೆ ನಡೆದ ವೃತ್ತಾಂತವನ್ನು ಹೇಳಲಾರಂಭಿಸಿದನು. ಆಗ ಕಮಲನಾಭನೆಂಬ ಸ್ನೇಹಿತನೊಬ್ಬನು ಶ್ರೀಪತಿಯ ಬಳಿಯಲ್ಲಿ ಕುಳಿತಿದ್ದನು. ಅಷ್ಟರಲ್ಲಿ ಹೊರಗಿನಿಂದ ಬಾಗಿಲ

ಪಡಕುಗಳು ಧಡ್ ಧಡ್ ತೆರೆದವು. ಕಾಲುಗಳ ತುಳಿತದಿಂದ ನೆಲವು ಅದಿರಹತ್ತಿತು. ಆ ಸಪ್ಪಳದ ಜೊತೆಯಲ್ಲಿ ಸಿಳ್ಳು ಕೇಳ ಬರತೊಡಗಿತು. ಪ್ರಿಯವಾಚಕರೇ, ಈ ಸಿಳ್ಳು ಯಾವದಾಗಿರಬಹುದು? ನಿಮಗೆ ಆ ವ್ಯಕ್ತಿಯು ಗುರುತು ಹತ್ತಬಹುದೇನು? ಛೇ; ಹತ್ತಲಿಕ್ಕಿಲ್ಲ. ಮಾಧವನು ಮಾತ್ರ ಗುರುತು ಹಿಡಿದು ಹ! ಸವಾರಿ ಬಂತೆಂಬಂತೆ ತೋರುತ್ತದೆ, ಎಂದು ನುಡಿದನು ಆತನ ಮಾತುಗಳು ಮುಗಿಯುವಷ್ಟರಲ್ಲಿ ಆ ಸಿಳ್ಳು ಹಾಕಿದ ಗೃಹಸ್ಥನು ಪಡಸಾಲೆಯಲ್ಲಿ ಬಂದು—"ಏನು ನೀವಿನ್ನೂ ನಿದ್ದೆಗಣ್ಣಿನಲ್ಲಿರುವಿರೇನು?" ಎಂದು ನುಡಿದನು

ಮಾಧವ—ಏನೋ, ಭೀಮಾ, ನಿನ್ನನ್ನು ಹಿಡಕೊಂಡು ಹೋಗಿದ್ದರಂತಲ್ಲ; ಈಗಾಗಲೇ ಯಾಕೆ ಬಿಟ್ಟುಕೊಟ್ಟರು?

ಭೀಮ—ಏ ಬದ್ಮಾಷ, ನನ್ನನ್ನು ಯಾರು ಹಿಡಕೊಂಡು ಹೋಗಿದ್ದರು? ಅದಾವನು ನನ್ನ ವೈಕ್ತಿ ಮುಟ್ಟುವವನು? ನಾನೇ ಬೇಕಂತ ಶಿವರಾಯನ ಜೊತೆಯಲ್ಲಿ ಹೋಗಿದ್ದೆನು. ಯಾಕೆ ನಿಮಗೆ ಈಗ ಅಸಮಾಧಾನವಾಯಿತೇನು?

ಈ ಪ್ರಕಾರ ಮಾತಾಡುತ್ತ ಭೀಮನು ತನ್ನ ಕಾಲಬಳಿಯಲ್ಲಿ ಬಿದ್ದಿರುವ ಒಂದು ದಿಂಬನ್ನು ಫುಟ್‌ಬಾಲದಂತೆ ಕಸುವಿನಿಂದ ಒದ್ದನು. ಪಾಪ! ಆ ಬೂರಲ ಅರಳಿಯ ಮೃದುವಾದ ತಕ್ಕೆಯು ಆ ಪೆಟ್ಟನ್ನು ಸಹಿಸಿಕೊಳ್ಳದೆ ಮತ್ತೊಂದು ಪೆಟ್ಟನ್ನು ತಪ್ಪಿಸಿಕೊಳ್ಳುವದಕ್ಕಾಗಿಯೋ ಎಂಬಂತೆ ಅದು ಅಲ್ಲಿಂದ ಕಮಲನಾಭನ ಬಳಿಗೆ ಧಾವಿಸಿ ಆತನ ತಲೆಯ ಮೇಲೇರಿ ಕೂತುಕೊಂಡಿತು "ಅಸಭ್ಯ-ಮೂರ್ಖ-ಪಶು" ಇತ್ಯಾದಿ ವಿಶೇಷಣಗಳನ್ನು ಭೀಮನಿಗೆ ಕೊಡುತ್ತ ಕಮಲನಾಭನು ಎದ್ದು ನಿಂತನು. ಆಗ ಭೀಮನು ಆತನ ಕಪಾಳ ಮೋಕ್ಷವನ್ನು ಮಾಡಿ, ಅವನು ನೋಡ ನೋಡುವಷ್ಟರಲ್ಲಿ ಅಲ್ಲಿಂದ ಮಾಯವಾದನು. ತಮ್ಮನ ಈ ಅವಿವೇಕತನವನ್ನು ನೋಡಿ

ನಕ್ಕು ಮಾಧವನೂ, ಶ್ರೀಪತಿಯೂ ಹೊರಟುಹೋದರು. ತನಗಾದ ಅಪಮಾನವನ್ನು ಆ ಬಂಧುದ್ವಯರು ನೋಡಲಿಲ್ಲೆಂಬ ಸಂತೋಷ ದಿಂದ ಕಮಲನಾಭನು ಅಲ್ಲಿಂದ ಕಾಲ್ತೆಗೆದನು.

ಕಮಲನಾಭನ ಸತ್ಕಾರವನ್ನು ಮೇಲೆ ಹೇಳಿದಂತೆ ಮಾಡಿ ಭೀಮರಾಯನು ತನ್ನ ತಾಯಿಯ ಕಡೆಗೆ ಹೋಗುತ್ತಿರಲು, ಒಂದು ಮೂಲೆಯಲ್ಲಿ ನಿಂತು ತನ್ನನ್ನು ನೋಡಿ ನಗುತ್ತಿರುವ 'ಶಂಭು' ಎಂಬ ಆಳುಮಗನನ್ನು ಕಂಡು ಆತನಿಗೆ ಬ್ರಹ್ಮಾಂಡದಷ್ಟು ಸಿಟ್ಟು ಬಂದಿತು. ಆ ಆಳುಮಗನು ಆ ಮನೆಯ ಹಿರಿಯಸೊಸೆಯ ಕೊರಳಪದಕವಾಗಿ ಕುಳಿತಿದ್ದನಾದ್ದರಿಂದ ಅವನು ಮನೆಯಲ್ಲಿ ಯಾರನ್ನೂ ಲೆಕ್ಕಿಸುತ್ತಿದ್ದಿಲ್ಲ ಮನೆಯೊಳಗಿನ ಸುಂದರಿಯೂ, ತರುಣಿಯೂ, ಅಧಿಕಾರ ಸಂಪನ್ನಳೂ ಆದ ಸ್ತ್ರೀಯ ಅನುಗ್ರಹವಿದ್ದಬಳಿಕ ಯಾವ ಆಳುಮಗನು ಅಂಜುವನು? ಮತ್ತು ಅವನು ತಾನೇ ಧನ್ಯನೆಂದು ತಿಳಿದು ತನ್ನ ಪ್ರತಿಷ್ಠೆಯನ್ನು ಬೆಳೆಯಿಸದೆ ಯಾಕೆ ಬಿಡುವನು? ಅದರಂತೆ ಶಂಭುವಿಗಾದರೂ ಸ್ವರ್ಗ-ಸ್ವರ್ಗವೆಂದು ಜನರು ಯಾತಕ್ಕೆ ಅನ್ನುವರೋ ಅದು ಮೂರೇ ಬೆರಳು ಉಳಿದಂತಾಗಿತ್ತು. ಅಂದಬಳಿಕ ಆತನು ಭೀಮರಾಯನನ್ನು ನೋಡಿ ಅಣಗಿಸಿದ್ದರಲ್ಲಿಯೂ, ನಕ್ಕದ್ದರಲ್ಲಿಯೂ ಆಶ್ಚರ್ಯವೇನು? ಆದರೆ ಈ ಅಪಮಾನವು ಜಾತ್ಯಾ ಅಭಿಮಾನಿಯಾದ ಭೀಮರಾಯನಿಗೆ ಸಹನವಾಗಲಿಲ್ಲ. ಅವನು ತತ್‌ಕ್ಷಣದಲ್ಲಿ ಶಂಭುವಿನ ಕಡೆಗೆ ಹೋಗಿ ಅವನನ್ನು ಎತ್ತಿ ನೆಲಕ್ಕೆ ಅಪ್ಪಳಿಸಿ, ಗುದ್ದಿ, ಒದೆದು ಅವನಿಗೆ ಚನ್ನಾಗಿ ಸಂಭಾವನೆ ಮುಟ್ಟಿಸಿ, ಅವನನ್ನು ಹೊರಗಿನ ಚೌಕಿನಲ್ಲಿ ಎಳಕೊಂಡು ಬಂದನು. ಅಲ್ಲಿಯಾದರೂ ಸಿಟ್ಟಿನಿಂದ ಹುಚ್ಚನಾಗಿದ್ದ ಭೀಮರಾಯನು ಅವನನ್ನು ಚನ್ನಾಗಿ ಥಳಿಸಿ, ರಾತ್ರಿಯಲ್ಲಿ ಪೋಲೀಸರಮೇಲೆ ಉಳಿದ ಸಿಟ್ಟನ್ನು ಶಂಭುವಿನ ಮೇಲೆ ತೀರಿಸಿ ಪುನಃ ತಾಯಿಯ ಕಡೆಗೆ ಸಾಗಿದನು

ಎರಡನೆಯಾವನಾದರೂ ಮನುಷ್ಯನಾಗಿದ್ದರೆ, ಭೀಮರಾಯ ಪ್ರಹಾರಗಳಿಗೆ ಎದೆಒಡಕೊಂಡು ರಕ್ತಕಾರಿ ಸತ್ತುಹೋಗುತ್ತಿದ್ದನು ಆದರೆ ಈ ಬಗೆಯ ಪೆಟ್ಟುಗಳನ್ನು ತಿಂದು ಶಂಭುವಿಗೆ ಮೈಯುಂಡು ಹೋಗಿತ್ತು. ಆದ್ದರಿಂದ ಆತನಿಗೆ ಈ ಪೆಟ್ಟುಗಳಿಂದ ಏನೂ ದುಃಖ ವೆನಿಸಲಿಲ್ಲ. ಅವನು ಆಕೂಡಲೆ ಎದ್ದುನಿಂತು ವಸ್ತ್ರಗಳನ್ನು ಜಾಡಿಸಿ ಕೊಂಡು ತನ್ನ ಪ್ರೀತಿಯ ಯಜಮಾನತಿಯ ಕಡೆಗೆ ಭೀಮರಾಯನ ಮೇಲೆ ಫಿರ್ಯಾದಿಯನ್ನು ಹೇಳುವದಕ್ಕಾಗಿ ನಡೆದನು.

ಮಾಧವನು ಕಾಲಿಂದಿಯ ಜ್ಯೇಷ್ಠಪುತ್ರನಾಗಿದ್ದನು. ಅವನು ರಾತ್ರಿಯ ಕಾಲದಲ್ಲಿ ಬಹುತರ ಮನೆಯಲ್ಲಿ ಮಲಗುತ್ತಿದ್ದಿಲ್ಲ. ಅಪ್ಪಿ ತಪ್ಪಿ ಎಂದಾದರೂ ಮನೆಯಲ್ಲಿ ಮಲಗಿಕೊಂಡ ದಿವಸ ಆತನು ತನ್ನ ಸುಲಕ್ಷಣವುಳ್ಳ ಪ್ರಿಯಮಡದಿಯನ್ನು ಶೃಂಗಾರಪರಿಪ್ಲುತವಾದ ಚೇಷ್ಟೆಗಳಿಂದ ಆನಂದಸಾಗರದಲ್ಲಿ ಮುಳುಗಿಸಿಬಿಡುತ್ತಿದ್ದನು. ಆತನು ಅತ್ಯಂತ ಶೃಂಗಾರಪ್ರಿಯನಾದ್ದರಿಂದ ಹೆಂಡತಿಗೆ ಅನೇಕ ಬಗೆಯ ಅಶ್ಲೀಲ ಹಾಡುಗಳನ್ನು ಕಲಿಸಿದ್ದನು; ಹಾಗೂ ಅವುಗಳನ್ನು ಅನ್ನು ವಾಗೆ ಪ್ರಸಂಗೋಚಿತವಾದ ಹಾವಭಾವಗಳನ್ನೂ ಕಲಿಸಿದ್ದನು. ಸ್ವತಃ ಗಂಡನೇ ಶಿಕ್ಷಕನಾದ ಬಳಿಕ ಸ್ವಾಭಾವಿಕ ಶೃಂಗಾರಪ್ರಿಯ ಳಾದ ಚಂಚಲಾಕ್ಷಿಯು ಅವುಗಳನ್ನು ಆಸ್ಥೆಯಿಂದ ಕಲತದ್ದು ಆಶ್ಚ ರ್ಯವಲ್ಲ.

ಶಂಭುವು ಭೀಮರಾಯನಿಂದ ಚನ್ನಾಗಿ ಸಂಭಾವನೆಯನ್ನು ಹೊಂದಿದ ಮುನ್ನಾದಿನ ರಾತ್ರಿಯಲ್ಲಿ ಮಾಧವರಾಯನು ಮನೆಯ ಲ್ಲಿಯೇ ಮಲಗಿಕೊಂಡಿದ್ದನು. ಆದ್ದರಿಂದ ಆ ದಂಪತಿಗಳಿಗೆ ಅಂದು ಸಂಪೂರ್ಣ ಜಾಗರಣೆಯಾಗಿತ್ತೆಂದು ಹೇಳುವ ಕಾರಣವಿಲ್ಲ. ಬೆಳಗೆ ಬೆಳಗಾದ ಬಳಿಕ ಅದೇಕೆ, ಹೊತ್ತು ಹೊರಟ ಬಳಿಕ ಮಾಧವನು ಕೋಣೆಯನ್ನು ಬಿಟ್ಟು ಹೊರಬೀಳಲು ಚಂಚಲಾಕ್ಷಿಯು ಎದ್ದು ನಿಲು

ಗನ್ನಡಿಯ ಮುಂದೆ ಇಟ್ಟಿರುವ ಕುರ್ಚಿಯಮೇಲೆ ಕುಳಿತು, ರಾತ್ರಿ ಯಲ್ಲಿ ಅಸ್ತವ್ಯಸ್ತವಾದ ತಲೆಗೂದಲುಗಳನ್ನು ಸಾವರಿಸಿಕೊಳ್ಳುತ್ತಿದ್ದಳು. ಆಗ ಅವಳ ಮೋರೆಯ ಮೇಲೆ ರಾತ್ರಿಯಲ್ಲಿ ಜಾಗರಣೆ ಮಾಡಿದ ಚಿಹ್ನವು ಸ್ಪಷ್ಟವಾಗಿ ಕಾಣುತ್ತಿತ್ತು. ಅವಳಿಗೆ ಮದ್ಯಪಾನದ ಗುಂಗು ಇನ್ನೂ ಪೂರ್ಣವಾಗಿ ಇಳಿದಿದ್ದಿಲ್ಲ ಆಗ ಅವಳು ಮನಸ್ಸಿಗೆ ಸೊಗಸಾಗದ್ದರಿಂದ ತಲೆಗೂದಲುಗಳನ್ನು ಬಿಟ್ಟು ಬಳಿಯಲ್ಲಿರುವ ಮದ್ಯದ ಶೀಸೆಯನ್ನು ತಕ್ಕೊಂಡು ಅದನ್ನು ಒಂದು ಕಾಜಿನ ಪೇಲೆ ಯಲ್ಲಿ ಸುರುವುತ್ತಿದ್ದಳು. ಅಷ್ಟರಲ್ಲಿ ಭೀಮರಾಯನಿಂದ ಪಾದ್ಯಪೂಜೆ ಯನ್ನು ಮಾಡಿಸಿಕೊಂಡ ಶಂಭುವು ಬಿಕ್ಕಿಬಿಕ್ಕಿ ಅಳುತ್ತ ಬಂದು ಆಕೆಯ ಬಳಿಯಲ್ಲಿ ನಿಂತುಕೊಂಡನು. ಆತನನ್ನು ಕಂಡಕೂಡಲೆ ಚಂಚಲಾಕ್ಷಿಯು ಮುಗುಳುನಗೆ ನಕ್ಕು—ಮೂರ್ಖ, ಸುಮ್ಮನೆ ಯಾಕೆ ಅಳುತ್ತೀ; ಆದದ್ದಾದರೂ ಏನು? ಒಂದು ದಿವಸವಾದರೂ............

ಶಂಭು—ಅದೇನಲ್ಲ ಬಾಯಿಸಾಹೇಬ, ಸಣ್ಣಧನಿಯರು ನನ್ನನ್ನು ಮೈಮುರಿಹೊಡೆದು ಹಣ್ಣುಹಣ್ಣು ಮಾಡಿದರು. ಇಕೋ ನೋಡಿರಿ ರಕ್ತವನ್ನು!

ಶಂಭುವಿನ ಮೈಮೇಲೆ ರಕ್ತದ ಒಂದು ಹನಿಯಾದರೂ ಹೊರ ಟಿದ್ದಿಲ್ಲ ಆದರೆ ಆತನು ಚಂಚಲಾಕ್ಷಿಯ ಬಳಿಗೆ ಫಿರ್ಯಾದಿಯನ್ನು ತಕ್ಕೊಂಡು ಬರುವಾಗ ತನ್ನ ಮೈಗೆ ಅಲ್ಲಲ್ಲಿಗೆ ಕೆಂಪುಬಣ್ಣವನ್ನು ಸಿಡಿಸಿಕೊಂಡು ಬಂದಿದ್ದನು. ತಮ್ಮ ಮಾತು ಸಾಧಿಸುವದಕ್ಕಾಗಿ ದುರ್ಜನರು ಎಂಥ ಸೋಗುಹಾಕುತ್ತಾರೆಂಬದನ್ನು ಹೇಳಲಿಕ್ಕಾಗುವದಿಲ್ಲ. ಶಂಭುವಿನ ಈ ದೂರನ್ನು ಕೇಳಿ ಚಂಚಲಾಕ್ಷಿಯು ಸಂತಪ್ತಳಾದಳು. ಕೈಯೊಳಗಿನ ಸರಾಯಿಯ ಪೇಲೆಯನ್ನು ಹಾಗೆಯೇ ಟೇಬಲ್ಲಿನ ಮೇಲಿಟ್ಟು ಅವನ ಮೈಯನ್ನು ಸೂಕ್ಷ್ಮರೀತಿಯಿಂದ ನಿರೀಕ್ಷಿಸಿದಳು; ಮತ್ತು ಹುಬ್ಬು ಗಂಟಿಕ್ಕಿ ಇಷ್ಟು ಜುಲುಮೆಯೆ! ಇರಲಿ, ಈ

ಭೀಮುನಿಗೆ ಅರ್ಧಚಂದ್ರನನ್ನು ತೋರಿಸದಿದ್ದರೆ ನಾನು ಚಂಚಲಾಕ್ಷಿ ಯಲ್ಲ! ಎಂದು ಪ್ರತಿಜ್ಞೆ ಮಾಡಿ ಅವಳು ಶಂಭುವಿನ ಕೈಯನ್ನು ಹಿಡಿದಳು. ಕೂಡಲೆ ಅವಳು—ಇಶ್ಶ್, ಎಷ್ಟು ದುರ್ಗಂಧವಿದು? ನಿನಗೆ ಸ್ವಚ್ಛತೆಯಿಂದ ಇರಲಿಕ್ಕೆ ಸಹ ಬರಬಾರದೇನು? ಈ ಹೊಲಸು ಎಲ್ಲಿಯದು? ಎಂದು ಅನ್ನುತ್ತ ಅವನ ಮೈಮೇಲೆ ಲವ್ಹೆಂಡರನೀರಿಂ ದು ಬಾಟ್ಲಿಯನ್ನು ಸುರುವಿ.... .. ...........

ಕೆಲವು ಹೊತ್ತಿನಮೇಲೆ ಶಂಭುವು ಅಲ್ಲಿಂದ ಹೊರಬಿದ್ದನು ಆತ ನು ಕೋಣೆಯಿಂದ ಹೊರಬೀಳುವದಕ್ಕೂ ಶ್ರೀಪತಿಯು ಅಲ್ಲಿಗೆ ಬರ ಲಿಕ್ಕೂ ತಾಳಗೂಡಿತು. ಶಂಭುವು ಘಮಘಮಿಸುತ್ತಿರುವದನ್ನು ನೋಡಿ ಶ್ರೀಪತಿಯ ತಲೆ ತಿರುಗಿತು. ಆತನು ಶಂಭುವಿನ ಮುಂಗೈ ಯನ್ನು ಹಿಡಿದು--“ಎಲೋ ಕಳ್ಳಾ, ನಿನ್ನ ನಿಟ್ಟೇನು. ನೆರಳೇನು? ದಿನದಿನಕ್ಕೆ ನಿನ್ನ ಜಂಬವು ಹೆಚ್ಚುತ್ತ ಹೋಯಿತಲ್ಲ. ಮೂರ್ಖಾ. ಕೇಳುವವರು ಯಾರೂ ಇಲ್ಲೆಂದು ತಿಳಿದಿರುವಿಯೋನು?” ಎಂದು ನುಡಿ ಯುತ್ತ ಅವನನ್ನು ದರದರ ಎಳಕೊಂಡು ಕೆಳಗಿನ ಚೌಕಿನಲ್ಲಿ ಬಂದನು. ಮತ್ತು ಮತ್ತೊಬ್ಬ ಆಳುಮಗನನ್ನು ಒದರಿ ಒಂದು ಬೆತ್ತವನ್ನು ತರಿ ಸಿಕೊಂಡು ಶಂಭುವಿನ ಬೆನ್ನಮೇಲೆ ಛಟಿಕೆಗಳನ್ನು ಹೊಡೆಯ ಹತ್ತಿ ದನು. ಬೆತ್ತದ ಪೆಟ್ಟುಗಳನ್ನು ತಾಳಲಾರದೆ ಆತನು ಕತ್ತೆಯಂತೆ ದನಿತೆಗೆದು ಒದರತೊಡಗಿದನು. ಆತನ ಬಾಯಿಯನ್ನು ಕೇಳಿ ಚಂಚ ಲಾಕ್ಷಿಯು ಕಿಡಕಿಯಲ್ಲಿ ಮೋರೆಹಾಕಿದಳು ಶಂಭುವಿನ ದೃಷ್ಟಿಯು ಆ ಕೋಣೆಯ ಕಡೆಗೇ ಇದ್ದದರಿಂದ ಆತನು ಚಂಚಲಾಕ್ಷಿಯನ್ನು ಕಂಡಕೂಡಲೆ ತನ್ನನ್ನು ಬಿಡಿಸಿಕೊಳ್ಳುವದರ ಸಲುವಾಗಿ ಆಕೆಗೆ ಆಣೆ ಯನ್ನಿಟ್ಟು ಅಂಗಲಾಚಿ ಹೇಳಿಕೊಳ್ಳಹತ್ತಿದನು.

ಭೀಮರಾಯನ ವರ್ತನದಿಂದ ಚಂಚಲಾಕ್ಷಿಯು ಸಿಟ್ಟಾಗಿ ಹಲ್ಲುತಿನ್ನುತ್ತಿದ್ದಳು ಅದರಲ್ಲಿ ಮತ್ತ ಶ್ರೀಪತಿಯು ಈ ಕೃತಿಯೊಂದು

ಒದಗಲು ಅವಳ ಸಂತಾಪಾಗ್ನಿಗೆ ಅಳತೆಯಿಲ್ಲದಾಯಿತು. ಮುಂದೆ ಏನು ಮಾಡಬೇಕೆಂಬದಕ್ಕೆ ಅವಳಿಗೆ ಬುದ್ಧಿಯು ತೋಚದ್ದರಿಂದ ಅವಳು ದೊಡ್ಡ ಚಿಂತೆಯಲ್ಲಿ ಮುಳುಗಿದಳು.

ಆದರೆ ಇದೇನು? ತಲೆಗೂದಲುಗಳು ಕೆದರಿರುತ್ತವೆ, ವಸ್ತ್ರಗಳು ಮಲಿನವಾಗಿವೆ, ಆಭರಣಗಳು ಒಂದೂ ಕಾಣುವದಿಲ್ಲ. ಈ ಹೆಣ್ಣುಮಗಳು ಯಾರಾಗಿರಬಹುದು? ಮುಖವು ಎಷ್ಟು ಭೀಷಣವಾಗಿ ತೋರುತ್ತದಲ್ಲ! ಈಗ ಈ ಕೆಂಗಣ್ಣುಗಳಿಂದ ಕಿಡಿಗಳು ಉದುರುವಂತೆ ಭಾಸವಾಗುತ್ತಲಿದೆ. ಪ್ರಿಯವಾಚಕರೇ, ಇಂಥ ಈ ದುರ್ಗೆಯು ಯಾರೆಂಬುವದು ನಿಮಗೆ ಹೊಳೆಯಿತೇನು? ಇವಳೇ ನಮ್ಮ ಕಾಲಿಂದಿಬಾಯಿಯವರ ಹಿರಿಯ ಸೊಸೆಯು! ಮಾಧವನ ಪುಣ್ಯತಮೆಯಾದ ಹೆಂಡತಿಯು!! ಶಂಭುವಿನ ಬೆನ್ನರಕ್ಷಕಳು!!! ನೋಡನೋಡುವಷ್ಟರಲ್ಲಿ ಆಕೆಯು ಮಾಧವನ ಶಯನಮಂದಿರದ ನೆರೆಕೋಣೆಯೊಳಗೆಹೊಕ್ಕು ನೆಲದಮೇಲೆ ಮಲಗಿಬಿಟ್ಟಳು. ಮೂರ್ಖಹೆಂಗಸರಿಗೆ ತಮ್ಮ ಕಾರ್ಯಸಾಧನದ ಕಡೆಯಉಪಾಯವೆಂದರೆ ಇದೇ!

ಶ್ರೀಮಂತರ ದೊಡ್ಡ ದೊಡ್ಡ ಮನೆಗಳಲ್ಲಿ ಶಯನಗೃಹ ಭೋಜನಗೃಹ ಮೊದಲಾದ ಗೃಹಗಳು ಇರುವಂತೆ ಕ್ರೋಧಗೃಹವಾದರೂ ಇರುತ್ತದೆ. ಯಾರಿಗಾದರೂ, ವಿಶೇಷವಾಗಿ ಹೆಂಗಸರಿಗೆ ಸಿಟ್ಟುಬಂದರೆ ಇಲ್ಲವೆ ತಮ್ಮ ಮನಸ್ಸಿನಲ್ಲಿದ್ದ ಕಾರ್ಯವನ್ನು ಸಾಧಿಸಿಕೊಳ್ಳಬೇಕೆಂಬ ಇಚ್ಛೆಯುಂಟಾದರೆ ಅವರು ಕ್ರೋಧಗೃಹವನ್ನು ಪ್ರವೇಶಿಸುವರು. ಅದರಂತೆ ಚಂಚಲಾಕ್ಷಿಯು ಕ್ರೋಧಗೃಹವನ್ನು ಹಿಡಿದಳು.

ಮಾಧವನು ಮನೆಗೆ ಬಂದು ಹೆಂಡತಿಯನ್ನು ಕಾಣದೆ ಹುಚ್ಚನಾದನು. ಬಳಿಕ ಈ ಎಲ್ಲ ಸಂಗತಿಯು ಗೊತ್ತಾಗಲು, ಕೂಡಲೆ ಅವನು ತನ್ನ ಪ್ರಿಯಪತ್ನಿಯ ಬಳಿಗೆ ಓಡಿಹೋದನು. ಅವನನ್ನು ಕಂಡಕೂಡಲೆ ಚಂಚಲಾಕ್ಷಿಯ ತುಟಿಗಳು ಸ್ಫುರಣಹೊಂದಿದವು.

ಅವಳು ಸಿಟ್ಟಗೆದ್ದ ನಾಗಿಣಿಯಂತೆ ಫೂತ್ಕಾರಮಾಡಿ ಅದರಂತೆ ಕೋಪ ಯುಕ್ತ ಮುದ್ರೆಯಿಂದ ಗಂಡನನ್ನು ನೋಡತೊಡಗಿದಳು.

ಅಹಹ! ಈ ಸಂಸಾರದಲ್ಲಿ ಸುಂದರಯುವತಿಯ ಕೋಪಯುಕ್ತ ಕಟಾಕ್ಷ ಹಾಗು ಓಷ್ಠದ್ವಯಗಳ ಸ್ಫುರಣ ಇವುಗಳನ್ನು ನೋಡಿ ಯಾವ ಪುರುಷರ ಚಿತ್ತವು ಚಂಚಲವಾಗಲಿಕ್ಕಿಲ್ಲ? ಪ್ರಸ್ತುತದಲ್ಲಿ ಮಾಧವನಸ್ಥಿತಿಯು ಹೀಗೆ ಆದದ್ದರಲ್ಲಿ ಅಸ್ವಾಭಾವಿಕವೇನು? ಅವನು ಅತ್ಯಂತ ಪ್ರೇಮದಿಂದ ತನ್ನ ಪ್ರಿಯಮಡದಿಯ ಕೈಹಿಡಿದು ನುಡಿದ ನೇನಂದರೆ—ಇದೇನು ಹುಚ್ಚುಚ್ಚಾರವು?

ಚಂಚಲಾಕ್ಷಿ (ಕೈಕೊಸರಿಕೊಂಡು)—ನನ್ನ ಶ್ರಾದ್ಧ.

ಮಾಧವ (ಮೋರೆಯ ಮೇಲೆ ಕೈಯೆಳೆಯುತ್ತ)—ಸುಂದರಿ, ಹೀಗೇಕೆ ಮಾಡುತ್ತೀ? ಇದರಿಂದ ನಾನು ಏನು ತಿಳಿದುಕೊಳ್ಳಲಿ?

ಚಂಚಲಾಕ್ಷಿ (ಮಾಧವನನ್ನು ದೂರಸರಿಸಿ)—ಸಾಕು ಸಾಕು, ಇಂಥ ಬಣ್ಣದಮಾತುಗಳಿಂದ ಏನು ಪ್ರಯೋಜನ? ಇಂಥ ಒಣಆಚ್ಛೆ ಯಿಂದ ಉಪಯೋಗವಿಲ್ಲ. ನನ್ನ ಮಾನಾಪಮಾನಗಳ ಪರವಿಯು ನಿಮಗಿಲ್ಲದ ಬಳಿಕ ಅದನ್ನು ಹೇಳಿಯಾದರೂ ಸುರಕೊಳ್ಳುವದೇನು?

ಮಾಧವ—ಏನು, ನಾನು ಪ್ರತ್ಯಕ್ಷ ಇರಲಿಕ್ಕೆ ನಿನ್ನ ಅವಮಾನ ವೇನು? ಈ ಶಬ್ದವಾದರೂ ನಿನ್ನ ಬಾಯಿಂದ ಹೇಗೆ ಬಂತು? ಇರಲಿ. ನಿನ್ನ ಅಪಮಾನ ಮಾಡಿದವರು ಯಾರೆಂಬದನ್ನು ಮೊದಲು ಹೇಳು.

ಚಂಚಲಾಕ್ಷಿ (ಮುರಕಮಾಡುತ್ತ)—ಈಗ ನೋಡಿರಿ. ಸೇವ ಕರಗೂ, ಆಳುಮಕ್ಕಳಿಗೂ ಹೊಡೆದು ಬಡೆದು ಮಾಡಿ ತ್ರಾಸುಕೊಡ ಹತ್ತಿದರೆ ಅವರು ನಿಮ್ಮ ಮನೆಯಲ್ಲಿರ್ರಾರೇನು? ಹೀಗೆ ಮಾಡುತ್ತ ಹೋದರೆ ನಿಮ್ಮ ಗೌರವವಾದರೂ ಏನು ಉಳಿಯುವದು? ನನ್ನ ಇಬ್ಬರು ದಾಸಿಯರು ನಮ್ಮ ಸಂಬಳವನ್ನು ತೀರಿಸಿಬಿಡಿರಿ, ನಾವು ಹೋಗುತ್ತೇವೆಂದು ಅನ್ನಹತ್ತಿದ್ದಾರೆ.

ಮಾಧವ—ಈಗ ಯಾರು ಯಾರನ್ನು ಹೊಡೆದರು?

ಚಂಚಲಾಕ್ಷಿ—ನಮ್ಮ ಶಂಭು ಇದ್ದಾನಲ್ಲವೇ! ಆತನನ್ನು ಬೆಳಗಿನಲ್ಲಿ ಭೀಮರಾಯರು ಹೊಡೆದು ಹಣ್ಣು ಹಣ್ಣಾಗ ಮಾಡಿದರು. ಬಳಿಕ ಮಧ್ಯಾಹ್ನದಲ್ಲಿ ಶ್ರೀಪತಿರಾಯರು ಬೆತ್ತದಿಂದ ಘಟಕೆಗಳನ್ನು ಹೊಡೆದು ಅವನ ಬೆನ್ನೆಲ್ಲಾ ರಕ್ತಮಯವಾಗಮಾಡಿದರು. ಇವರಿಬ್ಬರ ಹೊಡತಗಳಲ್ಲಿ ಪಾಪ, ಅವನು ಬದುಕಿದ್ದೇ ದೊಡ್ಡ ಪುಣ್ಯವಾಗಿದೆ.

ಮಾಧವ—ಅವರು ಅವನನ್ನು ಹೊಡೆದದ್ದು ನಿಜ. ನಾನು ಇತ್ತ ಬರುವಾಗ ಈ ಬಗ್ಗೆ ಭೀಮನನ್ನು ಕೇಳಿದೆನು. ಅವನು ಹೇಳಿದ್ದೇನಂದರೆ—"ಹರಾಮಖೋರ ಶಂಭು, ನನ್ನನ್ನು ನೋಡಿ ಅಣಗಿಸಿದ್ದರಿಂದ ನಾನು ಅವನನ್ನು ಥಳಿಸಿದೆನು;" ಅದರಂತೆ ಶ್ರೀಪತಿರಾಯನನ್ನಾದರೂ ವಿಚಾರಿಸಿದೆನು. ಅವನು ಸಹ "ನಿಮ್ಮ ಶಯನಗೃಹದಿಂದ ಬರುವಾಗ ಅವನು ಲವ್ಹೆಂಡರದ ಸುವಾಸನೆಯಿಂದ ಘಮ ಘಮಿಸುತ್ತಿದ್ದನು" ಎಂದು ಹೇಳಿದನು. ಆಯಿತು, ಶಂಭು ತನ್ನ ಅಧಿಕಪ್ರಸಂಗದಿಂದ ಪೆಟ್ಟುಗಳನ್ನು ತಿಂದಿರುತ್ತಾನೆ. ಇದರಲ್ಲಿ ಯಾರದೇನು ತಪ್ಪು? ನನಗೆ ಸಹ ಅವನ ಲೆವ್ಹೆಂಡರದ ವಾಸನೆಯು ಬಡಿಯಿತು.

ಚಂಚಲಾಕ್ಷಿ—ನಿಮ್ಮ ತಲೆ! ತಮ್ಮಂದಿರು ಹೇಳಿದ್ದೇ ನಿಮಗೆ ಪ್ರಾಧಾನ್ಯ. ಭೀಮರಾಯನಿಗೆ ಅಣಕಿಸುವದಕ್ಕೆ ಅವನಿಗೇನು ಬೇರಾಗಿತ್ತು? ಒಳ್ಳೇದು, ಲವ್ಹೆಂಡರದ ಮಾತಿನಲ್ಲಿ ಸ್ವಲ್ಪಸಹ ವಿಚಾರ ಮಾಡಬಾರದೇನು? ಮುಂಜಾನೆ ತಲೆಯಮೇಲೆ ಹಾಕಿಕೊಳ್ಳಬೇಕೆಂದು ನಾನೇ ಬಾಟ್ಲಿಯನ್ನು ತಕ್ಕೊಂಡೆನು; ಆದರೆ ಕೈತಪ್ಪಿ ಅದು ಕೆಳಗೆ ಬಿದ್ದು ಒಡೆಯಿತು. ಆಗ ಶಂಭು ಹತ್ತರ ಇದ್ದನು. ಅವನಿಗೆ ಆ ಚೂರುಗಳನ್ನು ಆರಿಸಿ ಹೊರಗೆ ಒಗೆಯಲಿಕ್ಕೆ ಹೇಳಿದೆನು. ಅವನು ಅದರಂತೆ ಮಾಡಿದನು. ಆದ್ದರಿಂದ ಅವನ ಧೋತರುಗೀತರು ವಾಸನೆಯುಳ್ಳದ್ದಾಗಿದ್ದೀತು! ಬೇಕಾದರೆ ಅಲ್ಲಿ ನೋಡಿರಿ, ನೆಲದಮೇಲೆ

ಲವೆಂದರ ಬಿದ್ದ ಡೆಯೋ ಇಲ್ಲವೋ ಎಂಬದನ್ನು!

ಮಾಧವ—ಪ್ರಿಯೇ, ನೀನು ಸುಳ್ಳುಹೇಳುತ್ತೀಯೇನು? ನನಗೆ ಈಗ ನಿಜವಾದ ಸಂಗತಿಯು ಗೊತ್ತಾಯಿತು. ಶಂಭು ನಿರ ಪರಾಧಿಯಿರುತ್ತಾನೆ. ಭೀಮು ಶ್ರೀಪತಿಯರಿಬ್ಬರೂ ನಿಷ್ಕಾರಣವಾಗಿ ಅವನನ್ನು ಹೊಡೆದಿರುತ್ತಾರೆ.

ಚಂಚಲಾಕ್ಷಿ —ಇದರಿಂದ ನಿಮ್ಮ ಅಪಮಾನವಾದಂತಾಯಿತೋ ಇಲ್ಲವೋ? ನೀವು ಎಲ್ಲರಿಗೂ ಹಿರಿಯರು; ನಿಮ್ಮ ಹಿರಿಯತನವೇ ನಡೆಯುವದಿಲ್ಲೆಂದ ಬಳಿಕ ಆಳುಹೋಳುಗಳ ಪಾಡೇನು?

ಸ್ತ್ರೀಚರಿತ್ರದ ಈ ಅದು ತಲೀಲೆಗೆ ಭ್ರಾಂತಿಗೊಂಡು ಮಾಧ ವನು ಕೆಳಗಿನ ಚೌಕಿನಲ್ಲಿ ಬಂದನು ಅಲ್ಲಿ ಶ್ರೀಪತಿಯು ಕಮಲನಾಭ ನೊಡನೆ ಹರಟೆಕೊಚ್ಚುತ್ತ ಕುಳಿತುಕೊಂಡಿದ್ದನು. ಚೌಕಿನೊಳಗೆ ಬಂದ ಕೂಡಲೆ ಮಾಧವನು—ಶ್ರೀಪತಿ, ಈ ದಿವಸ ನೀನು ಶಂಭು ವಿನನ್ನು ನಿರ್ದಯದಿಂದ ಹೊಡೆದಿರುತ್ತೀ; ಅವನು ಸತ್ತಿದ್ದರೆ ಏನಾ ಗುತ್ತಿತ್ತೆಂಬದು ನಿನಗೆ ಗೊತ್ತಿರುವದೇನು? ಎಂದು ನುಡಿದನು.

ಶ್ರೀಪತಿಯು ಸಂತಪ್ತನಾದನು ಒಬ್ಬ ದೂರದೇಶದ ಸನ್ಮಿ ತ್ರನು ಬಂದಿರಲು ಅವನೆದುರಿಗೆ ತನ್ನ ಅಣ್ಣನು ಒಬ್ಬ ಯಃಕಶ್ಚಿತ ಆಳುಮಗನ ಪಕ್ಷವನ್ನು ಕಟ್ಟಿ ಮಾತಾಡುತ್ತಿರುವನೆಂಬದು ತಿಳಿದ ಕೂಡಲೆ ಅವನು ಸಿಟ್ಟಿನಿಂದ ಹುಚ್ಚನಾಗಿ ನುಡಿದನೇನಂದರೆ—ಏನಾ ಗುತ್ತಿತ್ತು? ಸತ್ತಿದ್ದರೆ ಒಂದುಬಗೆಯಿಂದ ವಿಹಿತವೇ ಆಗುತ್ತಿತ್ತು. ಆ ಆಳುಮಗನನ್ನು ಹೊಡೆದರೆ ನಿಮಗೆ ಸಿಟ್ಟುಬರುವ ಕಾರಣವೇನು? ಬಹಳಮಾಡಿ ಇದು ಅತ್ತಿಗಿಬಾಯಿಯವರ ಕರಾಮತಿಯಾಗಿರಬೇಕು. ನಾನು ಆ ನೀಚನನ್ನು ಈಗಿಂದೀಗಲೇ ಮನೆಬಿಟ್ಟು ಹೊರಗೆ ಹಾಕು ತ್ತೀನೆ. ಎಲೆ, ಯಾರಿದ್ದೀರಿ ಅಲ್ಲಿ? ಹುಶೇನ,—ಹುಶೇನ—

ಇತ್ತ ಮಾಧವನಾದರೂ ಕಮಲನಾಭನ ಎದುರಿಗೆ ತನ್ನ

ತಮ್ಮನು ತನಗೆ ತಿರುಗಿ ವಾದಿಸುವದನ್ನು ನೋಡಿ ಸಿಟ್ಟಿ ಮತ್ತು ಸಿಂಹಗರ್ಜನೆಯನ್ನು ಮಾಡಿ ನೀನು ಬಾಜೀರಾಯನಲ್ಲ! ಅವನು ನನ್ನ ಆಳುಮಗನಿರುತ್ತಾನೆ. ಹ್ಯಾಗೆ ಹೊರಗೆ ಹಾಕುತ್ತೀ ನಾಕು ನೋಡೋಣ!

ಶ್ರೀಪತಿ—ಹ! ಹ! ಹೀಗೇನು? ಸ್ವಲ್ಪ ತಡೆಯಿರಿ, ತೋರಿಸುತ್ತೇನೆ ನನ್ನ ಕೈಯನ್ನು!

ಆಗ ಆ ಬಂಧುದ್ವಯರು ಪರಸ್ಪರರನ್ನು ಸಿಟ್ಟಿನಿಂದ ನೋಡುತ್ತಿದ್ದರು. ಇಬ್ಬರೂ ದುರಾಗ್ರಹಿಗಳು; ಇಬ್ಬರಲ್ಲಿಯೂ ಪರಸ್ಪರರ ವಿಷಯವಾಗಿ ತಿರಸ್ಕಾರ. ಶ್ರೀಪತಿಯು ತನ್ನ ಆಳುಮಕ್ಕಳನ್ನು ಕರೆದು—ಪಾದರಕ್ಷೆಗಳಿಂದ ಶಂಭುವಿನನ್ನು ಹೊಡೆದು ಹೊರಗೆ ಹಾಕಿರೆಂದು ಆಜ್ಞಾಪಿಸಿದನು.

ಮಾಧವನು ತನ್ನ ಆಳುಮಕ್ಕಳನ್ನು ಕುರಿತು—ಖಬರದಾರ, ಶಂಭುನನ್ನು ಹೊರಗೆ ಹಾಕಿಸಗೊಡಬೇಡಿರಿ. ಇಷ್ಟೇ ಅಲ್ಲ, ಅವನ ಮೈ ಕೈಗೆ ಯಾರಾದರೂ ಮುಟ್ಟಿದರೆ ನಿಮ್ಮ ಗತಿ ನೆಟ್ಟಗಾಗಲಿಕ್ಕಿಲ್ಲ, ಎಂದು ಆಜ್ಞಾಪಿಸಿದನು

ಆಯಿತು; ಶಂಭುವಿನ ಕಾಲಲ್ಲಿ ಕಾಳಗಕ್ಕೆ ಪ್ರಾರಂಭವಾಯಿತು ಇಬ್ಬರ ಆಳುಮಕ್ಕಳೂ ಕೈಗೆ ಕೈ ಹತ್ತಿ ಬಡಿದಾಡಲುಪಕ್ರಮಿಸಿದರು. ಕಮಲನಾಭನ ಸಂಗಡ ಇಬ್ಬರು ಮೂವರು ಆಳುಗಳಿದ್ದರು. ಅವರು ತಮ್ಮ ಒಡೆಯನ ಕಣ್ಣಾಸನ್ನೆಯಿಂದ ಶ್ರೀಪತಿಯ ಆಳುಗಳಲ್ಲಿ ಕೂಡಿಕೊಂಡು ಮಾಧವನ ಆಳುಗಳನ್ನು ಹೊಡೆಯಹತ್ತಿದರು. ಕಡೆಗೆ ಮಾಧವನ ಆಳುಗಳು ಹೆದರಿ ಓಡಿಹೋದರು.

ಕಲ್ಲಿಣ್ಣೆಯು ಬಿದ್ದ ಬಳಿಕ ಬೆಂಕಿಯು ಹ್ಯಾಗೆ ನಂದಬೇಕು? ಮಾಧವನ ಆಳುಗಳು ಶ್ರೀಪತಿಯ ಆಳುಗಳ ಮೇಲೂ, ಕಮಲನಾಭನ ಆಳುಗಳ ಮೇಲೂ ಪೋಲೀಸಿನಲ್ಲಿ ಫಿರ್ಯಾದಿಯನ್ನು ಮಾಡಿದರು.

ಲುನ್ನು ಕೇಳಿ, ಶ್ರೀಪತಿಯ ಪಿತ್ಥವು ತಲೆಗೇರಿತು ಅಣ್ಣನಾದ ಮಾಧವನು ಈ ಕೃತಿಯನ್ನು ಮಾಡಿಸಿರುವನೆಂದು ತಿಳಿದು ಅವನು ತನ್ನ ಪಾಲನ್ನು ಬೇರೆ ಮಾಡಿಸಿಕೊಳ್ಳಬೇಕೆಂದು ಬಗೆದನು. ಕೂಡಲೆ ಅವನು ಮನೆಯಲ್ಲಿ ವಕೀಲರದೊಂದು ದೊಡ್ಡ ಸಭೆಯನ್ನೇ ನೆರಿಸಿ ಬಿಟ್ಟನು. ಮಕ್ಕಳ ಈ ಅವಿವೇಕತನವನ್ನು ಕಂಡು ಕಾಲಿಂದಿಯು ಸಿಟ್ಟು ಬೆಂಕಿಯಾದಳು. ಆವಳು ಶ್ರೀಪತಿಯನ್ನೂ. ಮಾಧವನನ್ನೂ ಕರೆಕಳುಹಿದಳು; ಆದರೆ ಅವರು ಆಕೆಯ ಕಡೆಗೆ ಹೋಗಲಿಲ್ಲ.

ಕಾಲಿಂದಿಯು ಸಾಮಾನ್ಯ ಮನುಷ್ಯಳಿದ್ದಿಲ್ಲ. ಮನೆಯಲ್ಲಿ ಆಕೆಯ ದರ್ಪವು ವಿಶೇಷವಾಗಿತ್ತು. ಆಕೆಯ ಮೂರುಮಂದಿ ಗಂಡು ಮಕ್ಕಳೂ ಆಕೆಗೆ ಅಂಜಿ ಸಾಯುತ್ತಿದ್ದರು. ಹೀಗಿದ್ದರೂ, ಈ ದಿವಸ ಮಾಧವ-ಶ್ರೀಪತಿಯರು ಕರೆಸಿದರೆ ಬರದ್ದನ್ನು ನೋಡಿ, ಅವಳ ಸಂತಾಪವು ಹೆಚ್ಚಿತು. ಆ ಸಂತಾಪದ ಭರದಲ್ಲಿ ಆಕೆಯು ಅತ್ತಿಂದ ಇತ್ತ ಇತ್ತಿಂದ ಅತ್ತ ತಿರುಗಾಡಹತ್ತಿದಳು. ಹೀಗೆ ತಿರುಗಾಡುತ್ತ ಅವಳು ಅಕಸ್ಮಾತ್ತಾಗಿ ಚಂಚಲಾಕ್ಷಿಯ ಕೋಣೆಯ ಕಡೆಗೆ ಹೋದಳು. ಅಲ್ಲಿ ಚಂಚಲಾಕ್ಷಿಯೂ, ತಾರೆಯೂ ಗಂಜೀಫಿಯನ್ನು ಆಡುತ್ತ ಕುಳಿತಿದ್ದರು. ಅದು ದೃಷ್ಟಿಗೆ ಬಿದ್ದಕೂಡಲೆ ಕಾಲಿಂದಿಯು ವ್ಯಾಘ್ರಿಣಿಯಂತೆ ಹಾರಿ ತಾರೆಯನ್ನು ಹಿಡಿದೆಳೆದು-"ಕುಲಕಂಟಕೀ, ಯಾಕೆ ಹುಟ್ಟದೆ ನನ್ನ ಹೊಟ್ಟೆಯಲ್ಲಿ?" ಎಂದು ಅನ್ನುತ್ತ ಅವಳನ್ನು ದರ ದರ ಎಳಕೊಂಡು ನಡದಳು. ಹೋಗುವಾಗ ಆಕೆಯು ತನ್ನ ಸೊಸೆಯನ್ನು ಕುರಿತು ಅಂದಳೇನಂದರೆ—"ಇನ್ನೊಮ್ಮೆ ನೀನು ತಾರೆಯ ಸಂಗಡ ಆಡುವದು ಕಣ್ಣಿಗೆ ಬಿದ್ದರೆ ನಿನ್ನ ತಲಿ ಒಡದೇನು". ಅತ್ತೆಯ ಈ ಮಾತುಗಳಿಂದ ಚಂಚಲಾಕ್ಷಿಗೆ ಸರ್ಪಕಡಿದಂತಾಯಿತು. ಅವಳು ಆ ಕ್ಷಣದಲ್ಲಿ—"ಏನು, ನೀನು ನನ್ನ ತಲೆ ಒಡೆಯುವೆಯಾ? ಶಟವೀ ನೀನೆಷ್ಟರವಳು?" ಎನ್ನಲು ಅಷ್ಟರಲ್ಲಿ ಕಾ-

ಲಿಂದಿಯು ದೂರಹೋಗಿದ್ದಳು. ಆದರೂ ಅವಳಿಗೆ ಚಂಚಲಾಕ್ಷಿಯ ಪ್ರತ್ಯುತ್ತರವು ಕೇಳಿಸದೆ ಇರಲಿಲ್ಲ. ಆಗ ಆಕೆಯು ದಿವಾಣನನ್ನು ಕರೆದು, ಈದಿನ ಸಂಜೆಯೊಳಗಾಗಿ ಮಾಧವನನ್ನೂ, ಶ್ರೀಪತಿಯನ್ನೂ ಕುಟುಂಬಸಹಿತ ಹೊರಗೆ ಹಾಕೆಂದು ಆಜ್ಞಾಪಿಸಿದಳು.

ತಾಯಿಯು ಆಡಿದ ಮಾತಿಗೆ ತಪ್ಪುವವಳಲ್ಲವೆಂದು ತಿಳಿದು, ಮಾಧವ ಶ್ರೀಪತಿಯರು ಕುಟುಂಬಸಮೇತರಾಗಿ ಮನೆಬಿಟ್ಟು ಹೊರಟು ಹೋದರು. ಶಂಭುವು ಚಂಚಲಾಕ್ಷಿಯ ತೃನಾತಿಯುವನಾಗಿ ಅವರಿದ್ದಲ್ಲಿಗೆ ಹೋದನೆಂಬದನ್ನು ಹೇಳುವ ಕಾರಣವಿಲ್ಲ.

ಸಾಯಂಕಾಲದಲ್ಲಿ ಭೀಮರಾಯನು ಮನೆಗೆ ಬಂದನು. ಅವನಿಗೆ ಎಲ್ಲ ಸಂಗತಿಯೂ ಗೊತ್ತಾಯಿತು ಆಗ ಆತನು ತಾಯಿಯ ಕಡೆಗೆ ಹೋಗಿ—ಅವ್ವಾ, ಈದಿನ ಮನೆಯಲ್ಲಿ ಜಗಳ-ಬಿಗಳ ಆದಂತೆ ತೋರುತ್ತದಲ್ಲ? ಎಂದನು. ಕಾಲಿಂದಿಯು ಆಕ್ರೋಶದಿಂದ—ನಡೆ ಅತ್ತ, ನಿಮ್ಮಂಥ ಮೂರ್ಖರ ಮೋರೆಯನ್ನು ನಾನು ನೋಡುವದಿಲ್ಲ, ಎಂದಳು ತಾಯಿಯ ಈ ಸಿಟ್ಟನ್ನು ನೋಡಿ ಭೀಮರಾಯನು ಅವಳ ಚರಣಗಳನ್ನು ಗಟ್ಟಿಯಾಗಿ ಹಿಡಿದುಕೊಂಡನು. ಆಗ ಕಾಲಿಂದಿಯು ಸಂತುಷ್ಟಳಾಗಿ—ಬಾಳಾ, ಏಳಪ್ಪಾ ಎಂದು ಅವನನ್ನು ಎಬ್ಬಿಸಿದಳು. ಭೀಮರಾಯನು ಎದ್ದುನಿಂತು—ಅವ್ವಾ, ಈಗ ನನ್ನ ಜೀವದಲ್ಲಿ ಜೀವ ಬಂತು ನೋಡು; ನನ್ನ ಮೇಲೆ ನಿನ್ನ ಸಿಟ್ಟು ಇಲ್ಲವಷ್ಟೇ? ಹಾಗಾದರೆ ನಾನು ಹೊರಗೆ ಹೋಗಿ ಬರಲಾ? ಎಂದು ನುಡಿದು, ಆತನು ಎಲ್ಲಿಯೋ ನಡೆದನು.

ಮುಂದೆ ಎರಡು ದಿನಗಳಲ್ಲಿ ಮಾಧವ-ಶ್ರೀಪತಿಯರು ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲು ದೊರೆಯಬೇಕೆಂದು ದಿವಾಣೀಕೋರ್ಟಿನಲ್ಲಿ ಫಿರ್ಯಾದಿಯನ್ನು ಮಾಡಿದರು. ಹಾಯ್! ಹಾಯ್! ಗೃಹಕಲಹದ ಎಂಥ ಭಯಂಕರ ಪರಿಣಾಮವಿದು! ಒಬ್ಬ ಯಃಕಶ್ಚಿತ್

ಆಳುಮಗನ ಸಲುವಾಗಿ ಅಣ್ಣ-ತಮ್ಮಂದಿರಲ್ಲಿ, ತಾಯಿ-ಮಕ್ಕಳಲ್ಲಿ ವಿರೋಧ ಉತ್ಪನ್ನವಾಯಿತಲ್ಲವೇ? ತಸ್ಮಾತ್ ಗೃಹಕಲಹಕ್ಕೆ ದೂರ ಸಿಂದಲೇ ಅನಂತ ಪ್ರಣಾಮಗಳಿರಲಿ!'

---

| 4 |

ಶ್ರೀಪತಿ-ಮಾಧವರಿಬ್ಬರೂ ಒಡಿದಾಡಿದ ದಿವಸ ಅವರ ಮನೆಗೆ ಮಾಹಿಸ್ಮತಿಯಿಂದ ಒಬ್ಬ ಗೃಹಸ್ಥನು ಬಂದನು. ಆತನ ಹೆಸರು ವಾಮನ; ಅವನು ಮಾಹಿಸ್ಮತಿಯ ಮೆಡಿಕಲ್ ಕಾಲೇಜಿನಲ್ಲಿ ಡಾಕ್ಟರೀ ಅಭ್ಯಾಸವನ್ನು ಮಾಡುತ್ತಿದ್ದನು. ಆತನ ಮನೆಯು ರಾಮ ಕೋಟೆಯಲ್ಲಿಯೇ ಒಂದು ಓಣಿಯಲ್ಲಿ ತ್ರಿವಿಕ್ರಮನೆಂಬ ಒಬ್ಬ ಸ್ನೇಹಿತನ ಮನೆಯ ನೆರೆಯಲ್ಲಿತ್ತು. ತ್ರಿವಿಕ್ರಮನಿಗೂ ವಾಮನನಿಗೂ ಚಿಕ್ಕಂದಿನಿಂದ ಸ್ನೇಹಬಹಳ. ಆತನು ಕಾಲೇಜದ ರಜೆಯಲ್ಲಿ ವರುಷಕ್ಕೆ ಎರಡು ಸಲ ಊರಿಗೆ ಬರುತ್ತಿದ್ದನು.

ಆದರೆ ಈಗ ತ್ರಿವಿಕ್ರಮನು ಕೊಲೆಯಅಪರಾಧಕ್ಕೆ ಗುರಿಯಾಗಿ ಊರಬಿಟ್ಟು ಓಡಿ ಹೋದ ಭಯಂಕರ ವಾರ್ತೆಯನ್ನು ಪತ್ರಮುಖದಿಂದ ತಿಳಿದು ಆತನು ಮಿತ್ರನಿಗೆ ಸಹಾಯ ಮಾಡುವದಕ್ಕಾಗಿ ಆರು ತಿಂಗಳ ರಜೆಯನ್ನು ಪಡಕೊಂಡು ಬಂದಿದ್ದನು. ಜಗತ್ತಿನಲ್ಲಿ ಒಬ್ಬ ದುಷ್ಟ ಸ್ತ್ರೀಯ ಹೊರತು ತನ್ನವರೆಂಬವರು ಆತನಿಗೆ ಯಾರೂ ಇದ್ದಿಲ್ಲ. ಚಿಕ್ಕಂದಿನಲ್ಲಿ ಆತನ ತಂದೆಯು ಸತ್ತುಹೋಗಿದ್ದನು. ತಾಯಿಯು ಅವನನ್ನು ಜೋಕೆ ಮಾಡಿ, ಆಕೆಯು ಇಂದಿಗೆ ಮೂರು ವರುಷಗಳಾಚೆಗೆ ಕಾಲಿಂದಿಯ ದುಷ್ಟಕನ್ಯೆಯಾದ ತಾರೆಯ ಜೊತೆಗೆ ಆತನಿಗೆ ಕಂಕಣ ಕಟ್ಟಿ ಪರಲೋಕಕ್ಕೆ ಪ್ರಯಾಣ ಬೆಳಸಿದ್ದಳು.

ಒಟ್ಟಿಗೆ ವಾಮನನು ಸದ್ಯಕ್ಕೆ ಒಂದು ಬಗೆಯಿಂದ ಒಂಟಿಗನಾಗಿದ್ದನೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ ಯಾಕಂದರೆ ವಾಮನನು

ಸೂಟಿಯಲ್ಲಿ ನಾಲ್ಕು ದಿನ ಊರಿಗೆ ಬಂದಾಗ ಮಾತ್ರ ತಾರೆಯು ಗಂಡನ ಬಳಿಯಲ್ಲಿರುತ್ತಿದ್ದಳು. ಉಳಿದ ಕಾಲದಲ್ಲಿ ಅವಳು ತವರುಮನೆಯನ್ನೇ ಆಶ್ರಯಿಸುತ್ತಿದ್ದಳು. ಇದರಿಂದ ಆಕೆಯ ಪರಿಣಾಮವು ಹ್ಯಾಗೆ ಆಯಿತೆಂಬದನ್ನು ಕ್ರಮೇಣ ಮನಗಾಣಬಹುದು.

ವಾಮನನಿಗೆ ಬೇರೆ ಆಪ್ತರು ಯಾರೂ ಇದ್ದಿಲ್ಲವೆಂದು ಮೇಲೆ ಹೇಳಿದೆಯಷ್ಟೇ; ಆದ್ದರಿಂದ ಆತನು ತ್ರಿವಿಕ್ರಮನನ್ನೂ, ಆತನ ತಾಯಿಯನ್ನೂ ಬಹಳವಾಗಿ ಹಚ್ಚಿಕೊಂಡಿದ್ದನು. ವಾಮನನ ಈ ಪರಿಯ ಪ್ರೇಮದಿಂದ ತ್ರಿವಿಕ್ರಮನೂ, ಆತನ ತಾಯಿಯೂ ಅವನನ್ನು ಮನಮುಟ್ಟಿ ಪ್ರೀತಿಸುತ್ತಿದ್ದರು. ವಾಮನನು ಊರಿಗೆ ಬಂದಕೂಡಲೆ ಮೊದಲು ತ್ರಿವಿಕ್ರಮನ ಮನೆಗೆ ಹೋದನು. ಆತನು ಹೊಸ್ತಿಲಲ್ಲಿ ಕಾಲಿಟ್ಟು--ಲಲಿತೇ, ಲಲಿತೇ, ಎಂದು ಕೂಗತೊಡಗಿದನು.

'ಯಾರವರು' ಎಂದು ಓ ಕೊಡುತ್ತ ಲಲಿತೆಯು ಪಡಸಾಲೆಗೆ ಬಂದಳು. ಅವಳು ತ್ರಿವಿಕ್ರಮನ ತಂಗಿಯು; ವಾಮನನ ಕೂಡ ಅತ್ಯಂತ ಸಲಿಗೆಯಿಂದ ನಡೆಯುತ್ತಿದ್ದಳು. ಆದರೆ ಈ ದಿವಸ ಲಲಿತೆಯು ವಾಮನನನ್ನು ಕಂಡಕೂಡಲೆ ನಾಚಿಕೊಂಡು ದೂರದಲ್ಲಿ ನಿಂತುಕೊಂಡಳು ಅವಳ ಆ ನಾಚಿಕೆಗೆ ಆಕೆಯ ವಯಸ್ಸೇ ಕಾರಣವಾಗಿರಬಹುದು. ಹೆಣ್ಣುಹುಡುಗರು ಹರೆಯಕ್ಕೆ ಬಂದವೆಂದರೆ ಪ್ರತ್ಯಕ್ಷ ತಂದೆಯ ಮುಂದೆ ಸಹ ನಾಚಿಕೊಳ್ಳುವವು. ಅದರಂತೆ ಹದಿಮೂರು ವರುಷದ ವಯಸ್ಸಿನವಳಾದ ಲಲಿತೆಯು ವಾಮನನ ಸನ್ನಿಧಿಗೆ ಹೋಗಲು ನಾಚಿದಳು. ಆದರೆ ಬಂಧುಪ್ರೇಮಭರಿತನಾದ ವಾಮನನು ಪಡಸಾಲೆಯನ್ನೇರಿ, ಆಕೆಯ ಕೈಹಿಡಿದು-- ಲಲಿತೇ, ನೀನು ಎಷ್ಟು ಬೇಗ ದೊಡ್ಡವಳಾದೆ? ಆರೇ ತಿಂಗಳಲ್ಲಿ ನಿನ್ನ ಗುರುತು ಸಹ ನನಗೆ ಹತ್ತಲೊಲ್ಲದಲ್ಲ? ಎಂದು ನುಡಿದನು.

ವಾಮನನು ಕೈಹಿಡಿದ ಕೂಡಲೆ ಲಲಿತೆಯ ಮೈ ಕೂದಲುಗಳು ನೆಟ್ಟಗಾದವು. ಆಕೆಯ ಎದೆಯು ಧಡ್-ಧಡ್ ಹಾರಲಾರಂಭಿಸಿತು. ಅವಳ ಕಣ್ಣುಗಳು ಕತ್ತಲಗೂಡಿಸಿದವು. ಅದರಿಂದ ಅವಳು ಜೋಲಿ ಹೋಗಿ ಭೂಮಿಯ ಮೇಲೆ ಬೀಳುವ ಲಕ್ಷಣವು ತೋರಿತು. ಆಗ ವಾಮನನು ಅವಳನ್ನು ಗಟ್ಟಿಯಾಗಿ ಹಿಡಿದು ನುಡಿದನೇನಂದರೆ— ಲಲಿತೇ, ನಿನಗೆ ಆದದ್ದಾದರೂ ಏನು? ನಿನ್ನ ಪ್ರಕೃತಿಯು ಚನ್ನಾಗಿಲ್ಲವೇ? ಲಲಿತೆಯ ಬಾಯಿಂದ ಒಂದು ಅಕ್ಷರವಾದರೂ ಹೊರಡಲಿಲ್ಲ. ಬಳಿಕ ವಾಮನನು ಆಕೆಯೊಡನೆ ಉಪ್ಪರಿಗೆಯ ಮೇಲೆ ಹೋಗಿ ತ್ರಿವಿಕ್ರಮನ ತಾಯಿಯನ್ನು ನಮಸ್ಕರಿಸಿದನು. ಆ ಮುದುಕೆಯು ದೊಡ್ಡ ದನಿಯಿಂದ ಅತ್ತು ತನ್ನ ಮಗನ ಮೇಲೆ ಬಂದ ಪ್ರಸಂಗವನ್ನು ಸಂಪೂರ್ಣವಾಗಿ ಹೇಳಿದಳು. ಅದನ್ನು ಕೇಳಿ ವಾಮನನಿಗೆ ಅತ್ಯಂತ ವಿಷಾದವಾಯಿತು. ಆಗ ಅವನು ತ್ರಿವಿಕ್ರಮನ ತಾಯಿಗೆ ಧೈರ್ಯವ ಹೇಳಿ ಅಲ್ಲಿಂದ ಹೊರಬಿದ್ದನು. ಅವನು ಹೋಗಹೋಗುತ್ತ ದಾರಿಯಲ್ಲಿ ಶಂಕರರಾಯರ ಮನೆಯನ್ನು ಸೇರಿ ವಾಸುದೇವ ಮೊದಲಾದವರನ್ನು ಮಾತಾಡಿಸಿದನು. ಅನಂತರ ಅವನು ತನ್ನ ಮನೆಗೆ ನಡೆದಿರಲು, ಅವನ ದೃಷ್ಟಿಯು ಸಹಜವಾಗಿ ಕಂದಕದ ಕಡೆಗೆ ಹೋಯಿತು ಅಲ್ಲಿ ಒತ್ತಟ್ಟಗೆ ದಟ್ಟವಾಗಿ ಬೆಳೆದ ಗಂಜಿ-ಮುಳ್ಳುಗಳ್ಳಿ ಮೊದಲಾದವುಗಳ ಹೊದರಿನಲ್ಲಿ ಒಬ್ಬ ಮನುಷ್ಯನು ನಿಂತುಕೊಂಡು ತನ್ನನ್ನು ಕರೆಯುತ್ತಿರುವಂತೆ ಅವನಿಗೆ ತೋರಿತು. ಆಗ ಅವನು —'ಇವನಾರೆ'ಂದು ಬಗೆಯುತ್ತ ಹಾದಿಯಲ್ಲಿ ಮುಂದಿಯ ಸುಳುವು ಇಲ್ಲದ್ದನ್ನು ಕಂಡು ಸುಲ್ಲನೆ ಕಂದಕವನ್ನು ಇಳಿದು ಮುಳ್ಳುಗಳ್ಳಿಯನ್ನು ಸೇರಿದನು.

ಸುಮಾರು ಎರಡು ಗಳಿಗೆಯಾದ ಹೊತ್ತಾಗಿರಬಹುದು ಆಗ ಗಲ್ಲಿಯಲ್ಲಿ ಬಿಸಿಲಿನ ಪ್ರಖರವಾದ ತಾಪ; ಹಕ್ಕಿ-ಪಕ್ಕಿಗಳು ಸಹ ನೆಳ

ಲನ್ನು ತೊಲಗಲಿಕ್ಕೆ ಹಿಂಜರಿಯುತ್ತಿದ್ದವು. ಇಂಥ ಹೊತ್ತಿನಲ್ಲಿ ವಾಮನನು ಅಲ್ಲಿಗೆ ಹೋದನು. ಆತನು ಆ ಸೆಳೆಯನ್ನು ಸೇರಿ ನೋಡುತ್ತಾನೆ; ಎದುರಿಗೆ ಒಬ್ಬ ಮನುಷ್ಯನು ನಿಂತುಕೊಂಡಿದ್ದು, ಅವನ ಗಡ್ಡ-ಮೀಸೆಗಳು ಬಹು ದೀರ್ಘವಾಗಿ ಬೆಳೆದಿರುತ್ತವೆ. ಮೋರೆಯು ಸುಕ್ಕಿಹೋಗಿದೆ. ಕಣ್ಣುಗಳು ಒಳಸಿಕ್ಕಿವೆ. ಮೈಮೇಲೆ ಸುಬ್ಬನಿಗೆ ಒಪ್ಪುಬಹುದಾದ ಬಟ್ಟೆಗಳಿವೆ. ಈ ಬಗೆಯ ಆ ಮನುಷ್ಯನು ಹೊರಗಿನಿಂದ ಬಂದ ವಾಮನನನ್ನು ಕುರಿತು -ಮಿತ್ರಾ ವಾಮನಾ, ನಾನೇ ನಿನ್ನ ಬಾಲಮಿತ್ರ ದುರ್ದೈವಿಯಾದ ತ್ರಿವಿಕ್ರಮನು ಈಗ ನಾಲ್ಕು ದಿನಗಳಿಂದ ಅನ್ನದ ಅಗಳುಸಹ ಸಿಕ್ಕಿಲ್ಲ. ಮಿತ್ರಾ, ನಿನ್ನ ದರ್ಶನವು ನನಗೆ ಅಮೃತತುಲ್ಯವಾಗಿ ಭಾಸವಾಯಿತು, ಎಂದು ನುಡಿದು ಗಡ್ಡ ಮೀಸೆಗಳನ್ನು ಕಿತ್ತೊಗೆದು, ವಾಮನನನ್ನು ಗಟ್ಟಿಯಾಗಿ ಆಲಿಂಗಿಸಿದನು ವಾಮನನು ತ್ರಿವಿಕ್ರಮನ ಈ ಶೋಚನೀಯ ಸ್ಥಿತಿಯನ್ನು ನೋಡಿ ಒಂದು ತುಟಿ ಎರಡು ಮಾಡದೆ ಸರಕ್ಕನೆ ಅಲ್ಲಿಂದ ಹೊರಬಿದ್ದನು ಅವನು ನೆಟ್ಟಗೆ ಪೇಟೆಯನ್ನು ಸೇರಿ ಉಪಾಹಾರದ ಪದಾರ್ಥಗಳನ್ನು ಕೊಂಡುಕೊಂಡು ಪುನಃ ಆ ಕಂದಕಕ್ಕೆ ಹೋದನು. ತ್ರಿವಿಕ್ರಮನು ಆ ಉಪಾಹಾರವನ್ನು ಸಾಕಾಗುವಷ್ಟು ತಿಂದು, ಮಿತ್ರನು ತಂದ ನೀರನ್ನು ಕುಡಿದು ಶಾಂತನಾದನು. ಅನಂತರ ವಾಮನನು ಆತನನ್ನು ಕುರಿತು --

ವಾಮನ ನೀನು ಇಲ್ಲಿ ಎಷ್ಟು ದಿವಸಗಳಿಂದ ಅಡಗಿಕೊಂಡು ಕುಳಿತಿರುವೆ?

ತ್ರಿವಿಕ್ರಮ—ಇಂದಿಗೆ ಏಳುವಾರಗಳಾದವು

ವಾಮನ—ಮಿತ್ರಾ, ಇಂಥ ಕೆಲಸವನ್ನು ನೀನಾದರೂ ಯಾಕೆ ಮಾಡಿದೆ?

ತ್ರಿವಿಕ್ರಮ—ಪ್ರಿಯಮಿತ್ರಾ, ದೇವರ ಆಣೆಯಿಂದರೂ ನಾನು

ಈ ನೀಚ ಕೆಲಸವನ್ನು ಮಾಡಿರುವದಿಲ್ಲ.

ವಾಮನ—ಹಾಗಾದರೆ ಯಾರು ಮಾಡಿದರು?

ತ್ರಿವಿಕ್ರಮ—ಗೆಳೆಯಾ, ಕೊಲೆಯನ್ನು ಯಾರು ಮಾಡಿರುವ ರೆಂಬದು ನನಗೆ ಗೊತ್ತಿರುತ್ತದೆ; ಆದರೆ ಆ ಮನುಷ್ಯನ ಹೆಸರು ಮಾತ್ರ ನನಗೆ ಗೊತ್ತಿಲ್ಲ ಆ ಮನುಷ್ಯನು ಈಗಲೂ ಈ ಊರ ಲ್ಲಿಯೇ ಇರುತ್ತಾನೆ.

ವಾಮನ –ಹೀಗಿದ್ದರೆ ನೀನು ಯಾಕೆ ತಪ್ಪಿಸಿಕೊಂಡಿರುವೆ? ಇದ್ದ ಸಂಗತಿಯನ್ನು ಪೋಲೀಸರಿಗೆ ತಿಳಿಸಿ ನೀನು ದೋಷಮುಕ್ತ ನಾದರಾಯಿತು.

ತ್ರಿವಿಕ್ರಮ—ಮಿತ್ರಾ, ಇಷ್ಟು ಆಗುವಹಾಗಿದ್ದರೆ ಓಡಿಹೋ ಗುವ ಗೊಂದಲದಲ್ಲಿ ನಾನೆಲ್ಲಿ ಬೀಳುತ್ತಿದ್ದೆನು ನನ್ನ ಮಾತಿನ ಮೇಲೆ ಪೋಲೀಸರು ವಿಶ್ವಾಸವನ್ನು ಇಡಬಹುದೇ? ಭೋಲಾ ಹಾಗು ಘನಶ್ಯಾಮ ಇವರ ಕೊಲೆಯನ್ನು ನಾನೇ ಮಾಡಿರುವೆನೆಂದು ಪೋಲೀ ಸರು ನಿರ್ಧರಿಸಿರುತ್ತಾರೆ ಭೋಲಾನ ಮಗಳಾದ ರಾಧೆಗೂ ನನಗೂ ಸಂಬಂಧವಿತ್ತಷ್ಟೇ; ಆದರಿಂದ ಜನರು ನನ್ನ ಮೇಲೆ ಸಂಶಯ ತಕ್ಕೊಂಡಿರುತ್ತಾರೆ. ಅಂದಬಳಿಕ ಆತ್ಮರಕ್ಷಣಕ್ಕಾಗಿ ಪಲಾಯನದ ಹೊರ್ತು ಬೇರೆ ಉಪಾಯವು ಏನಿರುವದು?

ವಾಮನ (ನಿಟ್ಟುಸಿರು ಬಿಟ್ಟು)—ನೀನು ಹೀಗೆಯೇ ಇಲ್ಲಿ ಎಷ್ಟು ದಿವಸಗಳಿರತಕ್ಕವನು?

ತ್ರಿವಿಕ್ರಮ—ಇನ್ನು ಇಲ್ಲಿ ಇರುವದಿಲ್ಲ. ನಾನಿರುವ ಸ್ಥಳವು ಪೋಲೀಸರಿಗೆ ಗೊತ್ತಾದರೆ ಅನರ್ಥವಾದೀತು. ಇಂದೇ ರಾತ್ರಿ ಯಲ್ಲಿ ಈ ಸ್ಥಳವನ್ನು ಬಿಟ್ಟು ಬೇರೆ ಕಡೆಗೆ ಹೋಗುತ್ತೇನೆ.

ವಾಮನ—ನೀನು ನಿಜವಾಗಿಯೂ ನಿರ್ದೋಷಿಯಾಗಿದ್ದರೆ ಇಂಥ ದುಸ್ಥಿತಿಯಲ್ಲಿ ಯಾಕೆ ಕಾಲಹರಣ ಮಾಡುತ್ತೀ?

ತ್ರಿವಿಕ್ರಮ ಮಿತ್ರಾ, ನನಗೆ ಈ ಶೋಚನೀಯ ಸ್ಥಿತಿಯು ಸುಖಕರವೇ? (ಘಾಬರಿಯಾಗಿ) ಓಹೋ! ಯಾರೋ ಬರುತ್ತಿರುವರು. ಪ್ಲೀಸ! ಪ್ಲೀಸ! ಮಿತ್ರಾ, ಹೋಗು ಇಲ್ಲಿಂದ! ನಾನು ಅಡಗಿಕೊಳ್ಳುತ್ತೇನೆ, ಎಂದು ನುಡಿದು ಎಲ್ಲಿಯೋ ಕಾಣದಂತಾದನು.

ತ್ರಿವಿಕ್ರಮನ ಸ್ಥಿತಿಯನ್ನು ನೋಡಿ ವಾಮನನು ವಿಷಾದಪಟ್ಟು ಅಲ್ಲಿಂದ ಹೊರಬಿದ್ದು ಹಾದಿಯನ್ನು ಹಿಡಿದನು. ತ್ರಿವಿಕ್ರಮನನ್ನು ಹೇಗೆ ಪಾರುಮಾಡಬೇಕೆಂಬ ಯೋಚನೆಯು ಅವನನ್ನು ಮುಚ್ಚಿಹಾಕಿತು ಅವನು ಅದೇ ವಿಚಾರದಲ್ಲಿ ಗುಂಗಾಗಿ ಕಾಲುಗಳು ಒಯ್ದತ್ತ ಹೋಗುತ್ತಿರಲು, ಹಿಂದಿನಿಂದ ಯಾರೋ ಆತನ ಬೆನ್ನ ಮೇಲೆ ಕೈ ಬಡಿದರು ಆಗ ಅವನು ಬೆಚ್ಚಿಬಿದ್ದು ನೋಡುತ್ತಾನ, ತನ್ನ ಬೇಗನಾದ ಶ್ರೀಪತಿಯೂ ಕಮಲನಾಭನೂ ಮುಗುಳುನಗೆ ನಗುತ್ತ ಸಂತುಕೊಂಡಿದ್ದರು ಆಗ—

ಕಮಲನಾಭ—ಮಿತ್ರಾವಾಮನಾ, ನೀನು ಯಾವಾಗ ಬಂದೆ?

ವಾಮನ—ನಾನು ಇಂದೇ ಬಂದೆನು ತಾವು ಎಂದು ಬಂದಿರಾಯಿತು?

ಕಮಲನಾಭ ನಾವೂ ಇಂದೇ!

ವಾಮನ —ಈಗೇನು ತಿರುಗಾಡಲಿಕ್ಕೆ ಹೊರಬಿದ್ದಿರೋ?

ಕಮಲನಾಭ--ಒಂದುಮಹತ್ವದಕಾರ್ಯಕ್ಕೆ ಹೊರಟಿರುವೆವು.

ವಾಮನ— ಅದಾವ ಮಹತ್ಕಾರ್ಯವದು?

ಕಮಲನಾಭ—ಏನು? ನಿಮ್ಮ ಓಣಿಯಲ್ಲಿ ಗುಲಾಬಿಯ ಪುಷ್ಪಗಳು ಬಹಳಿರುವವಂತೆ? ಇದು ನಿಜವೋ? ಅವುಗಳ ಮಕರಂದವನ್ನು ಇನ್ನೂ ಯಾವ ಭ್ರಮರಗಳೂ ಸೂರೆಗೊಂಡಿಲ್ಲವಂತೆ! ನಾವು ಆ ಮಹತ್ಕಾರ್ಯಕ್ಕೆ ಕೈಹಾಕಬೇಕಾಗಿದೆ.

ವಾಮನ(ಅವರ ದುರುಳುತನವನ್ನು ಕಂಡುಹಿಡಿದು)—ಗುಲಾ

ಬಿಯ ವೃಕ್ಷಕ್ಕೆ ಮುಳ್ಳುಗಳಿರುವವೆಂಬದನ್ನು ಮರೆತಿರುವಿರೇನು?....

ಶ್ರೀಪತಿ (ನಡುವೇ ಬಾಯಿ ಹಾಕಿ) ಭ್ರಮರಗಳು—ಇಂಥ ಮುಳ್ಳಿಗೆ ಸೊಪ್ಪುಹಾಕಿದರೆ ತೀರಿತು. ಕೂಳಿಲ್ಲದೆಸಾಯಬೇಕಾದೀತು?

ಆ ರಾಜಶ್ರೀ ದ್ವಯರ ಮಾತು ಕೇಳಿ ವಾಮನನಿಗೆ ಸಂತಾಪ ವಾಯಿತು. ಅವನು ಅವರೊಡನೆ ಹೆಚ್ಚು ಮಾತಾಡದೆ ತನ್ನ ದಾರಿಯನ್ನು ಹಿಡಿದು ಹೊರಟುಹೋದನು. ಆತನು ಹೋದ ಬಳಿಕ ಶ್ರೀಪತಿಯು—ಕಮಲನಾಭ, ವಾಮನನು ಎಂಥ ಅರಸಿಕನಿವನು? ಛೀ, ಇಂಥ ಪಶುವಿಗೆ ನಮ್ಮ ತಾರೆಯನ್ನು ಕೊಡತಕ್ಕದ್ದಿಲ್ಲ, ಎಂದು ನುಡಿದು ಅವರಿಬ್ಬರು ನಗುತ್ತ ಮುಂದೆ ಸಾಗಿದರು. ಕುಸ ಮುಂದಕ್ಕೆ ಹೋಗುವಷ್ಟರಲ್ಲಿ ಕಮಲನಾಭನು ಚುಟುಕೆಯನ್ನು ಬಾರಿಸಿ, ಮಿತ್ರಾ ನೋಡಿದಿಯೇನು? ಎಂದು ಅಂದನು ಅದನ್ನು ಕೇಳಿ ಶ್ರೀಪತಿಯು ಅತ್ತಿತ್ತ ನೋಡುತ್ತಿರಲು, ಎದುರಿಗೆ ಉಪ್ಪರಿಗೆಯ ಮೇಲೆ ಒಂದು ಕಿಡಕಿಯಲ್ಲಿ ಒಬ್ಬ ತರುಣಿಯು ಅವನ ಕಣ್ಣಿಗೆ ಬಿದ್ದಳು ತರುಣಿಯು ಒಳ್ಳೇ ಸುಂದರಿಯಾಗಿದ್ದಳು. ಅವಳ ಮುಖಮಂಡಲದ ಬಲಭಾಗವು ಕಿಡಕಿಯೊಳಗಿಂದ ಸ್ಪಷ್ಟವಾಗಿ ಕಾಣುಬರುತ್ತಿತ್ತು. ಅವಳು ವಸ್ತ್ರವನ್ನು ಹೆಣೆಯುವ ಕೆಲಸದಲ್ಲಿ ತೊಡಗಿದಂತೆ ತೋರುತ್ತಿತ್ತು. ಶ್ರೀಪತಿಯು ಅವಳನ್ನು ಕಣ್ಣುತುಂಬಾ ನೋಡಿ ಆಹಾ! ಏನು ದಿವ್ಯ ರೂಪವಿದು? ನಾವು ಹುಡುಕುವ ಗುಲಾಬಿಯ ಪುಷ್ಪಗಳು ಇಲ್ಲಿಯೇ ಇರಬಹುದು! ಎಂದು ನುಡಿದನು. ಅದನ್ನು ಕೇಳಿ—

ಕಮಲನಾಭನು—ಮಿತ್ರಾ, ಈ ಮನೆಯು ಯಾರದಾಗಿರ ಬಹುದು?

ಶ್ರೀಪತಿ—ಈಗ ತಾನೇ ಗೊತ್ತಾಗುವದು; ಎಂದು ಅವರಿಬ್ಬರು ಆ ಮನೆಯ ಮುಂದೆ ಸಿಳ್ಳುಹೊಡೆಯುತ್ತ ಅತ್ತಿತ್ತ ಓಡಾಡ ತೊಡಗಿದರು ಆ ಸಪ್ಪಳಕ್ಕೆ ಆ ಸ್ತ್ರೀಯು ಸಹಜವಾಗಿ ಕಿಟಕಿಯಲ್ಲಿ

ಪೋರೆಯನ್ನು ಹಾಕಿ ನೋಡಿದಳು. ಅವಳ ಆ ಅಪ್ರತಿಮ ಮುಖ ಶೋಭೆಯನ್ನು ನೋಡಿ ಆ ಕುಲಾಂಗಾರರಿಬ್ಬರೂ ತಮ್ಮ ತಮ್ಮೊಳಗೆ ನಗುತ್ತ ಏನೇನೋ ಸನ್ನೆಗಳನ್ನು ಮಾಡಹತ್ತಿದರು. ಕೂಡಲೆ ಆ ಸ್ತ್ರೀಯು ಆ ಮೂರ್ಖರನ್ನು ತಿರಸ್ಕರಿಸಿ, ಕಿಟಕಿಯ ಬಾಗಿಲವನ್ನಿಕ್ಕಿ ಕೊಂಡು ತನ್ನ ಕೆಲಸಕ್ಕೆ ಹೊರಟು ಹೋದಳು

ಕಮಲನಾಥ -ಮಿತ್ರಾ, ಸಿಕ್ಕಿಯುವು; ಇಲ್ಲಿಯೇ ನಮ್ಮ ಗುಲಾಬಿಯ ಹೂಗಳಿರುವವು ನೋಡಿದೆಯಾ, ಪಿಟ್ಟನೆ ಮುಖಮುದ್ರೆಯಾದರೂ ಎಷ್ಟು ಮೋಹಕವಿತ್ತು? ಹ್ಯಾಗಾದರೂ ಮಾಡಿ ಈ ಮನೆಯು ಯಾರದೆಂಬದನ್ನು ಗೊತ್ತುಹಚ್ಚಲಿಕ್ಕೆ ಬೇಕು.

ಶ್ರೀಪತಿ -ಅಗೋ ಅಲ್ಲಿ ಕಾಣುವ ಎಲೆ-ಅಡಿಕೆಯ ಅಂಗಡಿಗೆ ಹೋಗೋಣ ನಡೆ; ಅಂದರೆ ಈ ಮನೆಯು ಯಾರದೆಂಬುವದು ತಾನೇ ತಿಳಿಯುವದು. ಬಳಿಕ ಅವರಿಬ್ಬರೂ ಅಂಗಡಿಗೆ ಹೋದರು. ತಾಂಬೂಲವನ್ನು ತಿನ್ನುತ್ತ ಶ್ರೀಪತಿಯು ಅಂಗಡಿಕಾರನನ್ನು ಕುರಿತು-

ಶ್ರೀಪತಿ -ಈ ಉಪ್ಪರಿಗೆಯ ಮನೆಯು ಯಾರದು?

ಅಂಗಡಿಕಾರ- ಇದು ಶಂಕರರಾಯರ ಮನೆಯು.

ಅಂಗಡಿಕಾರನ ಈ ಮಾತು ಕೇಳಿ ಶ್ರೀಪತಿಗೆ ಸಮಾಧಾನವಾಯಿತು ಅವನು ಓಹೋ, ನನಗೆ ಮರುವಾಗಿತ್ತು! ಅಂತೇ ನಿಮ್ಮನ್ನು ಕೇಳಿದೆನು, ಎಂದು ಅಂಗಡಿಕಾರನಿಗೆ ನುಡಿದು, ಮಿತ್ರಾ, ಏಳು ಹೋಗೋಣ ಅಂದನು. ಅವರಿಬ್ಬರು ಸ್ನೇಹಿತರು ಅಲ್ಲಿಂದ ಹೊರಬಿದ್ದು ಓಣಿಯಲ್ಲಿ ಬಂದಬಳಿಕ--

ಕಮಲನಾಥನು- ಶ್ರೀಪತಿ, ನೀನು ಬಲು ದಕ್ಷನು; ಆ ಸ್ತ್ರೀಯು ಯಾರೆಂಬದನ್ನು ಕೇಳಬಾರದಿತ್ತೇ?

ಶ್ರೀಪತಿ -ಕೇಳುವ ಕಾರಣ ಉಳಿಯಲಿಲ್ಲ. ಶಂಕರರಾಯನ ಮನೆಯ ಸ್ಥಿತಿಯು ನನಗೆ ಪೂರ್ಣವಾಗಿ ಗೊತ್ತಿರುವದು. ಶಂಕರ

ರಾಯನ ಮಗಳಾದ ಸುಲೋಚನೆಯ ಸೌಂದರ್ಯದ ಪ್ರಸಿದ್ಧಿಯನ್ನು ಕೇಳಬಲ್ಲೆನು. ಅವಳು ವಿಧವೆಯಿರುವಳು ನಾವು ನೋಡಿದ ಆ ಸ್ತ್ರೀಯ ಹಣೆಯಲ್ಲಿ ಕುಂಕುಮವಿದ್ದಿಲ್ಲವಷ್ಟೇ. ಅವಳು ಕೂದಲುಗಳನ್ನು ಸಹ ಕಟ್ಟಿದ್ದಿಲ್ಲ. ಅವಳೇ ಸುಲೋಚನೆಯಾಗಿರಬಹುದು.

ಕಮಲನಾಭ—ಮಿತ್ರಾ, ಇದೆಲ್ಲ ಒಳ್ಳೇದಾಯಿತು; ಮುಂದೆ............

ಶ್ರೀಪತಿ—ಆ ಬಗ್ಗೆ ಯೋಚನೆ ಬೇಡ. ಈಗ ಶಂಕರರಾಯನ ಮನೆಯವರು ಭಯಂಕರ ಬಡತನಕ್ಕೆ ಗುರಿಯಾಗಿರುವರು. ಏನಾದರೂ ಖರ್ಚಿಗೆ ಸಹಾಯ ಮಾಡಿದರೆ ನಮ್ಮ ಕೆಲಸವು ಶ್ರಮವಿಲ್ಲದೆ ಆಗುವದು.

ಕಮಲನಾಭ(ಶ್ರೀಪತಿಯ ಕೊರಳಿಗೆ ಕೈ ಹಾಕಿ)—ಮಿತ್ರಾ, ಈಗ ಮಾತ್ರ ನನಗೆ ಬಹಳ ಆನಂದವಾಯಿತು: ಎಂದು ಕುಣಿದಾಡಲಾರಂಭಿಸಿದನು.

ಬಳಿಕ ಆ ದುರ್ಜನ ಶಿರೋಮಣಿಗಳಿಬ್ಬರು ತಮ್ಮ ತಮ್ಮೊಳಗೆ ಏನೇನೋ ಮಾತಾಡಿಕೊಳ್ಳುತ್ತ ಆನಂದದಲ್ಲಿ ಮಗ್ನರಾಗಿ ಮನೆಯ ಕಡೆಗೆ ತೆರಳಿದರು.

---

## [ 5 ]

ಹಿಂದೆ ೨ನೇ ಪ್ರಕರಣದ ಕೊನೆಯಲ್ಲಿ ಶಿವರಾಯನನ್ನು ಪೋಲೀಸರು ಮ್ಯಾಜಿಸ್ಟ್ರೇಟ ಕೋರ್ಟಿಗೆ ಎಳೆದೊಯ್ದ ಸಂಗತಿಯನ್ನು ಹೇಳಿರುವದಷ್ಟೇ! ಅಲ್ಲಿ ಆತನ ನ್ಯಾಯವಿಚಾರಣೆಯಾಗುವ ಮೊದಲು ಆತನ ಅಪರಾಧವೇನೆಂಬದನ್ನು ವಾಚಕರಿಗೆ ಗೊತ್ತುಪಡಿಸುವದು ಅವಶ್ಯವಾಗಿದೆ.

ಶಿವರಾಯನು ಕಾಲೇಜಿನಲ್ಲಿ ಉಚ್ಚತರಗತಿಯ ಶಿಕ್ಷಣವೆಂದು ಈಗಿನ ಕಾಲದಲ್ಲಿ ಹೊಗಳಿಸಿಕೊಳ್ಳುವ ಶಿಕ್ಷಣವನ್ನು ಹೊಂದುತ್ತಿರಲು ಆವನ ಮನೆತನವು ದಾರಿದ್ರ್ಯ ದೇವತೆಯ ದವಡೆಯಲ್ಲಿ ಸಿಕ್ಕಿತು. ಆದ್ದರಿಂದ ಅವನು ಕಲಿಯುವದನ್ನು ಬಿಟ್ಟು ಸರಕಾರೀನೌಕರಿಯನ್ನು ಹಿಡಿಸಬೇಕಾಯಿತು. ಮೊದಮೊದಲು ಆತನಿಗೆ ನೌಕರಿಯು ಸಿಗುವದು ಕಷ್ಟವಾಯಿತು ಆದರೆ ಅವನ ಅಣ್ಣನಾದ ವಾಸುದೇವನು ತನ್ನ ಪುಣ್ಯವನ್ನು ಖರ್ಚುಮಾಡಿ ಒಬ್ಬ ಯುರೋಪಿಯನ್ ಗೃಹಸ್ಥನ ಶಿಫಾರಸಪತ್ರವನ್ನು ಸಂಪಾದಿಸಿ ತರಲು ಶಿವರಾಯನಿಗೆ ರಾಮಕೋಟೆಯ ಕಲೇಕ್ಟರಕಚೇರಿಯಲ್ಲಿಯೇ ತಿಂಗಳೊಂದಕ್ಕೆ ೩೦ರೂಪಾಯಿ ಸಂಬಳ ಸಿಗುವ ಸ್ಥಳವು ಸಿಕ್ಕಿತು ಶಿವರಾಯನು ತನ್ನ ಕೆಲಸವನ್ನು ಬಹು ಆಸ್ಥೆಯಿಂದ ಮಾಡುತ್ತಿದ್ದನಾದ್ದರಿಂದ ಆತನು ಸ್ವಲ್ಪ ದಿವಸಗಳಲ್ಲಿ ಸಾಹೇಬರ ಪ್ರೀತಿಗೆ ಪಾತ್ರನಾದನು. ಬರಬರುತ್ತ ಆತನ ಮೇಲೆ ಕಲೇಕ್ಟರಸಾಹೇಬರ ಮರ್ಜಿಯು ಹೆಚ್ಚಿತು ೧೦-೧೫ ವರ್ಷಗಳ ವರೆಗೆ ಒಂಟೆಯಭಾರದಷ್ಟು ಪೊತ್ತಿಗೆಗಳನ್ನು ಓದಿಓದಿ ಕೈಯೊಳಗಿನ ದುಡ್ಡು ಕಳೆದುಕೊಂಡು ಉಪಜೀವನಕ್ಕೆ ಬೇರೆ ಗತಿಕಾಣದೆ ನೌಕರಿಯನ್ನು ಇಚ್ಛಿಸುತ್ತಿದ್ದ ಜನರು ಶಿವರಾಯನು ಎಷ್ಟು ಪುಣ್ಯವಂತನೆಂದು ಕೊಂಡಾಡಹತ್ತಿದರು.

ಹೀಗಿರಲು ಒಂದು ದಿನ ಸಾಹೇಬರು ಶಿವರಾಯನಿಗೆ ಒಂದು ಕೆಲಸವನ್ನು ಹೇಳಿದರು ಒಂದು ಲಕ್ಕೋಟೆಯನ್ನು ರಜಿಸ್ತರಮಾಡಿಸಿ ಬರಬೇಕಾಗಿತ್ತು; ಶಿವರಾಯನು ಸಾಹೇಬರು ಕೊಟ್ಟ ಲಕ್ಕೋಟೆಯನ್ನು ತಕ್ಕೊಂಡು ತನ್ನ ಸ್ಥಳಕ್ಕೆ ಬಂದು, ತಾನು ಕೂಡ್ರುವ ಕುರ್ಚಿಯ ಮುಂದಿರುವ ಟೇಬಲ್ಲಿನ ಮೇಲೆ ಅದನ್ನು ಇಟ್ಟು ಬೇರೆ ಒಂದು ಅವಸರದ ಕೆಲಸಕ್ಕಾಗಿ ಒಂದು ಕ್ಷಣಹೊತ್ತು ಎಲ್ಲಿಯೋ ಹೋದನು. ಶಿವರಾಯನು ಅತ್ತ ಹೋಗಲು, ಅವನ ಅಣ್ಣನಾದ ವಾಸುದೇವರಾ

ಯನು ಯಾವದೋ ಒಂದು ಕಾರ್ಯನಿಮಿತ್ತವಾಗಿ ಬಂದನು. ಆಷರಲ್ಲಿ ಮತ್ತೊಬ್ಬ ಗೃಹಸ್ಥನು ಅಲ್ಲಿಗೆ ಬಂದು ವಾಸುದೇವರಾಯನ ಕೂಡ ಹರಟೆ ಕೊಚ್ಚುತ್ತ ನಿಂತನು.

ಹರಟೆಕೊಚ್ಚುವ ಆ ಗೃಹಸ್ಥನು ಮಾತಿನ ಭರದಲ್ಲಿ ಟೇಬಲ್ಲಿನ ಮೇಲಿನ ಲಕ್ಕೋಟೆಯನ್ನು ಕೈಯಲ್ಲಿ ತಕ್ಕೊಂಡು ತಿರುಗಿಸತೊಡಗಿದನು. ಸಾಹೇಬರುಲಕ್ಕೋಟೆಯ ಬಾಯಿಯನ್ನುಮುಚ್ಚದೆ ಇದ್ದದರಿಂದ ಅದರೊಳಗಿನ ಕಾಗದವುಕಳಚಿಬಿದ್ದಿತು. ಕೈಯೊಳಗೆ ಹಿಡಿದಲಕ್ಕೋಟೆಯೆಂತಹದು? ಅದರಲ್ಲೇನಿದೆ? ಎಂಬ ಸಂಗತಿಯ ಕಡೆಗೆ ಆ ಗೃಹಸ್ಥನ ಲಕ್ಷವಿದ್ದಂತೆ ತೋರಲಿಲ್ಲ. ಅವನು ಮಾತಾಡುತ್ತಾಡುತ್ತ ಲಕ್ಕೋಟೆಯನ್ನು ಚಲ್ಲಿ ಅದರೊಳಗಿಂದ ಕಳಚಿಬಿದ್ದ ಕಾಗದವನ್ನು ತಕ್ಕೊಂಡು ಸುರಳೀ ಮಾಡಿ ಸಿಗರೇಟನಂತೆ ಅದನ್ನು ಧೂಮ್ರಪಾನಕ್ಕೆ ಉಪಯೋಗಿಸಿಬಿಟ್ಟನು; ಅವನ ಈ ಕೃತಿಯ ಕಡೆಗೆ ವಾಸುದೇವರಾಯನ ಲಕ್ಷ್ಯವೂ ಹೋಗಲಿಲ್ಲ. ಮುಂದೆ ಕೆಲಹೊತ್ತಿನಮೇಲೆ ವಾಸುದೇವರಾಯನು ಹೊರಟುಹೋದನು. ಅನಂತರ ಶಿವರಾಯನು ತನ್ನ ಕೆಲಸ ಮುಗಿಸಿಕೊಂಡು ಗಡಿಬಿಡಿಯಿಂದ ಬಂದು, ವೇಳೆಯಾಯಿತೆಂದು ತಿಳಿದು ಸಾಹೇಬರು ಕೊಟ್ಟದ್ದ ಲಕ್ಕೋಟೆಯ ಬಾಯಿ ಬಂದಮಾಡಿಕೊಂಡು ಟಪಾಲಕಟ್ಟೆಗೆ ನಡೆದನು ಅದರೊಳಗೆ ಏನಿರುವದೆಂಬದನ್ನು ಅವನು ಈ ಮೊದಲು ನೋಡಿದ್ದಿಲ್ಲ. ಈಗೂ ನೋಡಲಿಲ್ಲ. ಆತನ ಈ ದಡ್ಡತನವೇ ಮುಂದೆ ಮುಳುವಾಯಿತು. ಇರಲಿ.

ಯಾವ ಪಾಪವನ್ನೂ ಅರಿಯದ ಶಿವರಾಯನು ಅದನ್ನು ಅಂಚೇಕಟ್ಟೆಯಲ್ಲಿ ರಜಿಸ್ತರಮಾಡಿಸಿ ಬಂದನು. ಮುಂದೆ ಕೆಲವು ದಿವಸಗಳ ಮೇಲೆ ಸಾಹೇಬರಿಗೆ ಲಕ್ಕೋಟೆಯಲ್ಲಿ ಏನೂ ಇದ್ದಿಲ್ಲವೆಂಬ ವರ್ತಮಾನವು ಬರಲು ಆತನು ಸಿಟ್ಟಿನಿಂದ ಹುಚ್ಚನಾದನು. ತಾನು ಅದರಲ್ಲಿ ೧೦೦ ರೂಪಾಯಿಗಳ ಒಂದು ನೋಟನ್ನು ಇಟ್ಟದ್ದು ಅದು

ಎಲ್ಲಿ ಮಾಯವಾಯಿತು, ಎಂದು ಆತನು ಯೋಚಿಸಿದನು. ಆಗ ಆತನ ಎದುರಿಗೆ ಶಿವರಾಯನ ಮೂರ್ತಿಯು ತಟ್ಟನೆ ನಿಂತುಕೊಂಡಿತು. ತಾನು ರಜಿಸ್ತ್ರಕ್ಕಾಗಿ ಕಳಿಸಿದ ನೋಟನ್ನು ಶಿವರಾಯನೇ ಎತ್ತಿ ಹಾಕಿರುವನೆಂಬ ಕಲ್ಪನೆಯು ಅವನಲ್ಲಿ ಸ್ವಾಭಾವಿಕವಾಗಿ ಉತ್ಪನ್ನವಾಯಿತು. ಬಳಿಕ ಕೇಳುವದೇನು? ಸಾಹೇಬರಲ್ಲಿ ಶಿವರಾಯನ ವಿಷಯಕ್ಕಿದ್ದ ಪ್ರೇಮಾದರಗಳೆಲ್ಲ ಕ್ಷಣದಲ್ಲಿ ಲಯವಾದವು. ಅವನು ಶಿವರಾಯನನ್ನು ಕರೆಯಿಸಿ ಕೇಳುವಗೊಡವೆಗೆ ಸಹ ಹೋಗದೆ ತತ್ಕ್ಷಣದಲ್ಲಿ ಆ ನಿರಪರಾಧಿಯ ಮೇಲೆ ಖಟ್ಲೆಯನ್ನು ಮಾಡಿದನು.

ಪ್ರಿಯವಾಚಕರೇ, ನಮ್ಮ ಸರಳ ಸ್ವಭಾವದ ಶಿವರಾಯನ ಮೇಲೆ ಹೊತ್ತ ಅಪರಾಧವು ಎಂತಹದೆಂಬದು ಗೊತ್ತಾಯಿತಷ್ಟೇ! ಈ ಸುದ್ದಿಯು ಬಿರುಗಾಳಿಯಲ್ಲಿ ಹತ್ತಿದ ಬೇಗೆಯಂತೆ ಸರಸರ ಬಹುಜನರ ಕರ್ಣಪ್ರದೇಶಗಳಮೇಲೆ ಹಾಯ್ದು ಶಂಕರರಾಯನ ಮನೆಯವರೆಗೆ ಬರಲು ಆ ಕುಟುಂಬದವರ ಕೈಕಾಲುಗಳು ಥರಗುಟ್ಟಿ ನಡುಗಿದವು. ಮರಣೋನ್ಮುಖನಾಗಿದ್ದ ಶಂಕರರಾಯನಂತೂ ಆ ವಾರ್ತೆಯ ಶ್ರವಣದಿಂದ ದೀರ್ಘನಿದ್ರಾಪ್ರಸಕ್ತನಾದನು. ಹಾಯ್! ಹಾಯ್!! ಪಾಪ! ನಿರ್ದೋಷಿಯಾಗಿದ್ದ ಶಿವರಾಯನು ಪೋಲೀಸರಿಂದ ಬಂಧಿಸಲ್ಪಟ್ಟವನಾಗಿ, ಮ್ಯಾಜಿಸ್ಟ್ರೇಟರು ತನ್ನಮೇಲೆ ಇಡುವ ಚಾರ್ಜನ್ನು ನೋಡಿ ಭಯಚಕಿತನಾದನು. ಆತನು ಕೋರ್ಟಿನ ಸವಾಲಿಗೆ ಉತ್ತರಕೊಡಲಸಮರ್ಥನಾಗಿ ಮಾತು ಬಾರದ ಮೂಕನಂತೆ ನಿಂತು ಬಿಟ್ಟನು. ಕಡೆಗೆ ಆತನು ಧೈರ್ಯವ ತಂದುಕೊಂಡು ತನ್ನ ಪ್ರಾಮಾಣಿಕತನವನ್ನು ಎಷ್ಟು ಬಗೆಯಾಗಿ ಸಿದ್ಧಮಾಡಿತೋರಿಸಿದರೂ ಕೋರ್ಟಿಗೆ ಅದು ಸರಿಯೆಂದು ತೋರಬರಲಿಲ್ಲ. ನ್ಯಾಯದೇವತೆಯು ಪರಾಧೀನಳಾದ್ದರಿಂದ ಸತ್ಯವು ಅಸತ್ಯವಾಗಿ ತೋರಿದ್ದರಲ್ಲಿ ಆಶ್ಚರ್ಯವಿಲ್ಲೆಂದು ಶಿವರಾಯನು ಮರಮರನೇ ಮರುಗಿದನು. ಲಕ್ಕ್ಯೋಟಿಯೊ

ಳಗಿದ್ದ ನೋಟು ಹ್ಯಾಗೆ ಕಳವಾಗಿ ಹೋಯಿತೆಂಬದನ್ನು ಹೇಳಲಿಕ್ಕೆ ಶಿವರಾಯನು ಅಶಕ್ತನಾದ್ದರಿಂದ ಅವನ ಮೇಲೆಯೇ ಅಪರಾಧವು ಸಿದ್ಧವಾಯಿತು; ಆಗ ಆತನಿಗೆ ಆರುತಿಂಗಳ ಕಠಿಣ ಶಿಕ್ಷೆಯೂ ೧೫೦ ರೂ. ಗಳ ದಂಡವೂ ವಿಧಿಸಲ್ಪಟ್ಟಿತು. ಹಾಯ್! ಹಾಯ್! ದೈವಗತಿಯು ವಿಚಿತ್ರವು!! ಎಣ್ಣೆ ತೀರಿದ ದೀಪದಂತೆ ಶಂಕರರಾಯನ ಮಕ್ಕಳು ಐಶ್ವರ್ಯ ಭ್ರಷ್ಟರಾಗಿ ಎಲ್ಲ ಬಗೆಯ ವಿಟಂಬನೆಗಳಿಗೆ ಒಬ್ಬೊಬ್ಬರೇ ಗುರಿಯಾಗತೊಡಗಿದರು. ಏರಿಕೆಯದೊಂದು ಕಾಲ; ಇಳಿಕೆಯದೊಂದು ಕಾಲ!

ಶಿವರಾಯನು ಮಾನಹಾನಿಗೆ ಗುರಿಯಾಗಬಾರದೆಂದು ಭೀಮರಾಯನು ತ್ರಿಕರಣಪೂರ್ವಕವಾಗಿ ಯತ್ನಿಸಿದನು. ಆದರೆ ದೈವಯೋಗದಿಂದ ಅದು ಸಾಧ್ಯವಾಗಲಿಲ್ಲ. ಅದರಿಂದ ಭೀಮರಾಯನಿಗೆ ಅತ್ಯಂತ ವ್ಯಸನವಾಯಿತು. ಆತನು ತನ್ನ ಏಶ್ವಪ್ರಯತ್ನಕ್ಕೆ ಯಶಸ್ಸು ದೊರೆಯಲಿಲ್ಲೆಂದು ಚಡಪಡಿಸುತ್ತಿರಲಿಲ್ಲ. ಶಿವರಾಯನ ಮೇಲೆ ಹೊತ್ತ ಅಪರಾಧಕ್ಕೆ ನಿಜವಾಗಿ ತಾನೇ ಕಾರಣನಾದ್ದರಿಂದ ಆತನು ಈ ಪರಿಯಾಗಿ ಮಿಡುಕುತ್ತಿದ್ದನು ಶಿವರಾಯನು ರಜಿಸ್ತರ ಮಾಡಿಸುವ ದಿವಸ ತನ್ನ ಟೇಬಲ್ಲಿನಮೇಲೆ ಲಕ್ಕೋಟಿಯನ್ನಿಟ್ಟಾಗ ವಾಸುದೇವರಾಯನ ಜೊತೆಗೆ ಇನ್ನೊಬ್ಬ ಗೃಹಸ್ಥನು ಮಾತಾಡುತ್ತ ನಿಂತಿದ್ದನಷ್ಟೇ; ಆ ಗೃಹಸ್ಥನೇ ನಮ್ಮ ಭೀಮರಾಯನು. ಈತನು ಲಕ್ಷಾಧೀಶರ ಮಗನಾಗಿದ್ದರೂ ಜಾತ್ಯಾ ಹುಂಬನಿದ್ದನೆಂಬದನ್ನು ನಮ್ಮ ವಾಚಕರು ಬಲ್ಲರು. ಈ ಮಹಾರಾಯನೇ ದುರ್ಲಕ್ಷದಿಂದ ಸಾಹೇಬನ ನೋಟನ್ನು ಸಿಗರೇಟಿನಂತೆ ಸೇದಿ ಒಗೆದನು! ಯಾವಾಗ್ಗೆ ನೋಟು ಕಳವಾದ ಬಗ್ಗೆ ಶಿವರಾಯನ ಮೇಲೆ ವಾರಂಟು ಹುಟ್ಟಿ-ತೋ ಆಗ್ಗೆ ಎಲ್ಲ ಸಂಗತಿಯ ಶ್ರವಣದಿಂದ ಆತನ ಕಣ್ಣುಗಳು ನಿಚ್ಚಳವಾಗಿ ತೆರೆದವು. ಮಾಡುತ್ತಾನೇನು? ಪ್ರಸಂಗವು ಕೈಮೀರಿ

ಹೋಗಿತ್ತು. ಆಗ ಆವನಿಗೆ ಬಹು ದುಃಖವಾಯಿತು. ಬರಿಯ ದುಡ್ಡು ಕೊಡುವದಾಗಿದ್ದರೆ, ಸಾವಿರಗಟ್ಟಲೆಯಾದರೂ ಆತನು ಕೊಡಲಿಕ್ಕೆ ಸಿದ್ಧನಿದ್ದನು, ಆದರೆ ತನ್ನ ದುರ್ಲಕ್ಷದಿಂದ ಶಿವರಾಯ ನಂಥ ಸಾತ್ವಿಕನ ಮಾನಕ್ಕೆ ಹಾನಿಪ್ರೊದಗುವ ಪ್ರಸಂಗವಿದ್ದವರಿಂದ ಆತನು ಶಿವರಾಯನಿಗೆ ಈ ಪ್ರಕರಣದಲ್ಲಿ ಪರಿಪರಿಯಿಂದ ಸಹಾಯ ಮಾಡಿದನು. ಸ್ವತಃ ಜಿಲ್ಲೆಯ ಮ್ಯಾಜಿಸ್ಟ್ರೇಟನೇ ಫಿರ್ಯಾದಿಯಾ ದ್ದರಿಂದ ಅಲ್ಲಿ ಯಾರ ಆಟವೂ ನಡೆಯಲಿಲ್ಲ. ಕಡೆಗೆ ಆಗತಕ್ಕದ್ದು ಆಗಿ ಹೋಯಿತು.

ಪ್ರಿಯವಾಚಕರೇ: ನೋಡಿದಿರಾ, ಪ್ರಸಂಗಗಳು ಹ್ಯಾಗೆ ಬರು ತ್ತವೆಂಬದನ್ನು? ಯಾವ ಸಾಹೇಬನನ್ನು ಶಿವರಾಯನು ಪರಮಾಪ್ತ ನೆಂದು ನಂಬಿದ್ದನೊ ಆ ಸಾಹೇಬನೇ ಕಡೆಗೆ ಆತನಿಗೆ ಯಮಸ್ವರೂ ಪಿಯಾದನು. ಬಹುದಿವಸಗಳ ವರೆಗೆ ಶಿವರಾಯನ ಸುಗುಣಗಳನ್ನು ನೋಡುತ್ತಲಿದ್ದ ಆ ಸಾಹೇಬನಿಗೆ ಈ ಕೆಲಸವು ಶಿವರಾಯನಿಂದ ಆಗಿರಬಹುದೇ ಹ್ಯಾಗೆಂಬ ವಿಚಾರವು ಹುಟ್ಟಲಿಲ್ಲ. ಇದೇ ಆಶ್ಚ ರ್ಯವು! ಪರಮಾಶ್ಚರ್ಯವು! ದೈವವು ಪ್ರತಿಕೂಲವಿದ್ದಾಗ ಅನ್ಯರ ಮನಸ್ಸನ್ನು ಸಹ ಕಲ್ಲುಮಾಡಿಸುತ್ತದೆಂಬದು ಸುಳ್ಳಲ್ಲ.

---

[ 6 ]

ಒಂದು ದಿನ ಮಧ್ಯಾಹ್ನದ ಸಮಯ; ವಾಸುದೇವರಾಯನ ಮನೆಯ ಬಾಗಿಲವನ್ನು ಯಾರೋ 'ಧಪ' ಎಂದು ಬಡಿದರು. ಆ ಕಾಲಕ್ಕೆ ಮನೆಯಲ್ಲಿ ಯಾರೂ ಪುರುಷರಿದ್ದಂತೆ ತೋರಲಿಲ್ಲ. ಹೆಂಗಸ ರೆಲ್ಲರೂ ಉಪ್ಪರಿಗೆಯಲ್ಲಿದ್ದರು. ಒಂದು ವೇಳೆ ಅವರು ಮಲಗಿದ್ದರೂ ಮಲಗಿರಬಹುದು. ಸೌಮಿತ್ರಿಯು ಮಾತ್ರ ಕೆಳಮನೆಯಲ್ಲಿ ಕುಳಿತು ಕೊಂಡು ಪಾತ್ರೆಗಳನ್ನು ತಿಕ್ಕುತ್ತಿದ್ದಳು. ಯಾರೋ ಬಾಗಿಲಬಡಿ ಯುವದನ್ನು ನೋಡಿ ಆಕೆಯು ಚಟ್ಟನೆದ್ದು ಹೋಗಿ ಚಿಲಕವನ್ನು ತೆಗೆ

ದಳು. ಕೂಡಲೆ ಹೊರಗಿನ ಮನುಷ್ಯನು ಕಸುವಿನಿಂದ ಬಾಗಿಲವನ್ನು ದೂಡಿದನು ಅಷ್ಟರಲ್ಲಿ ಸೌಮಿತ್ರಿಯು ದೂರ ಸರಿದಳು. ಇಲ್ಲದಿದ್ದರೆ ಆಕೆಯ ಕಪಾಳಮೋಕ್ಷವೇ ಆಗುತ್ತಿತ್ತು.

ಬಾಗಿಲತೆರೆದ ಮನುಷ್ಯನು ಒಳ್ಳೇ ಡೌಲಿನಿಂದ ಮನೆಯನ್ನು ಸೇರಿ ಸೌಮಿತ್ರಿಯನ್ನು ನಖಶಿಖಾಂತವಾಗಿ ನೋಡಿ "ಸೌಮಿತ್ರೀ, ನೀನು ನನಗೆ ಬಹಳ ಚಂದಕಾಣಿಸುತ್ತೀ" ಎಂದು ನುಡಿದು ಆಕೆಯ ಕೈಯನ್ನು ಹಿಡಿದನು.

ಸೌಮಿತ್ರಿಯು ಏನನ್ನೂ ಮಾತಾಡದೆ ನಾಚಿಕೆಯಿಂದ ಕೆಳಗೆ ಮೋರೆ ಮಾಡಿಕೊಂಡು ನಿಂತಳು. ಅದನ್ನು ಕಂಡು—

ಗೃಹಸ್ಥ—ನೀನು ಹೀಗೆ ಮೌನವ್ರತವನ್ನು ಹಿಡಿದರೆ ನಾನು ಈಗಿಂದೀಗಲೇ ಹೊರಟೆನು.

ಸೌಮಿತ್ರಿಯು ಕಿಂಚಿತ್ ಮೋರೆಯನ್ನು ಮೇಲಕ್ಕೆತ್ತಲು, ಆ ಗೃಹಸ್ಥನು ಒಂದೇಸವನೆ ತನ್ನನ್ನುನೋಡುತ್ತಿರುವದು ಆಕೆಗೆ ಗೊತ್ತಾಯಿತು. ಕೂಡಲೆ ಆವಳು ಪುನಃ ಕೆಳಗೆ ಮುಖವನ್ನು ಮಾಡಿದಳು.

ಗೃಹಸ್ಥ—ಸೌಮಿತ್ರೀ, ನನ್ನಿಂದ ಏನೂ ಉಪಕಾರವಾಗದ್ದಕ್ಕೆ ನನಗೆ ಬಹಳ ಕೆಡಕೆನಿಸುತ್ತದೆ. ಈ ಪಾಪದ ಪ್ರಾಯಶ್ಚಿತ್ತಕ್ಕಾಗಿ ನಾನು ಒಂದುವರುಷ ಅಜ್ಞಾತವಾಸವನ್ನು ಮಾಡುವ ಕುರಿತು ವಿಲಾಯತಿಯಕಡೆಗೆ ಪ್ರಯಾಣಬೆಳಸತಕ್ಕವನಿದ್ದೇನೆ. ಅಲ್ಲಿನಾನು ಸಾಹೇಬದೀಕ್ಷೆಯನ್ನುಹೊಂದಿ ತಿರುಗಿಬಂದಬಳಿಕ ನೀನು ನನ್ನನ್ನು ಪ್ರೀತಿಸಿದರೆ ನೀನೂ ನನ್ನೊಡನೆ ಮೇಮುಸಾಹೇಬಳಾಗುವೆಯಂತೆ! ಇನ್ನು ತಡವಾಗುತ್ತದೆ. ಈ ಪೆಟ್ಟಿಗೆಯನ್ನುತಕ್ಕೋ; ಇದರಮೇಲೆ ನಿನ್ನದೇ ಒಡೆತನ ವಿರುವದು; ನಿನ್ನ ಇಚ್ಛೆಗೆ ಬಂದರೆ ವಾಸುದೇವರಾಯನಿಗೆ ಕೊಡು."

ಸೌಮಿತ್ರಿಯು ಪೆಟ್ಟಿಗೆಯನ್ನು ತಕ್ಕೊಂಡು ಬೇರೆ ಕಡೆಗೆ ಇಟ್ಟಳು. ಅಷ್ಟರಲ್ಲಿ ಆ ಗೃಹಸ್ಥನು ಆಕೆಯನ್ನು ತಬ್ಬಿಕೊಂಡು,

ಅವಳ ಅಂಗ ಪ್ರತ್ಯಂಗಗಳ ಚುಂಬನವನ್ನು ತಕ್ಕೊಳ್ಳಹತ್ತಿದನು. ಸೌಮಿತ್ರಿಯು ಎರಡೂ ಕೈಗಳಿಂದ ತನ್ನ ಕಣ್ಣುಗಳನ್ನು ಗಟ್ಟಿಯಾಗಿ ಮುಚ್ಚಿಕೊಂಡಳು. ಬಳಿಕ ಆ ಗೃಹಸ್ಥನು ಕಿಂಚಿತ್ತಾದರೂ ವಿಲಂಬ ಮಾಡದೆ ಅಲ್ಲಿಂದ ಹೊರಟು ಹೋದನು.

ಪ್ರಿಯವಾಚಕರೇ, ಇದು ನಿಮಗೆ ಆಶ್ಚರ್ಯವಾಗಿ ತೋರಿರ ಬಹುದಲ್ಲವೇ? ಲಗ್ನವಾಗದೆ ಕನ್ಯಾವಸ್ಥೆಯಲ್ಲಿದ್ದ ಸೌಮಿತ್ರಿಯನ್ನು ಪ್ರೀತಿಸುವ ಹಾಗೂ ಚುಂಬನವನ್ನು ತಕ್ಕೊಳ್ಳುವ ಈ ಗೃಹಸ್ಥನು ಯಾರಿರಬಹುದು? ಎಂಬಬಗ್ಗೆ ನಿಮಗೆ ಸಂಶಯ ಬಂದಿರಬಹುದು; ಅದರಂತೆ ಸೌಮಿತ್ರಿಯವರ್ತನದ ಬಗ್ಗೆಯಾದರೂನೀವು ಸಂಶಯದಲ್ಲಿ ಬಿದ್ದಿರಬಹುದು. ಆದರೆ ಹಾಗಲ್ಲ! ಈಗ ಬಂದು ಹೋದ ಗೃಹಸ್ಥನು ನಿಮ್ಮ ಪರಿಚಯದ ಭೀಮರಾಯನು; ಆತನು ಶಿವರಾಯನ ವಿಷಯ ವಾಗಿ ಪ್ರಯತ್ನಪಟ್ಟಿದ್ದನ್ನು ನೀವು ಬಲ್ಲಿರಿ. ತನ್ನಿಂದ ಶಿವರಾಯನು ಮಾನಕಳಕೊಂಡನೆಂಬ ಪಶ್ಚಾತ್ತಾಪದಿಂದ ಆತನು ಹೀಗೆ ಊರು ಬಿಟ್ಟು ಹೋಗುವ ಯೋಚನೆಯನ್ನು ಮಾಡಿದ್ದನು. ತನ್ನ ಕಾಲಲ್ಲಿ ಶಿವ ರಾಯನು ನೌಕರಿಯನ್ನು ಕಳಕೊಂಡು ಕಾರಾಗೃಹದಲ್ಲಿ ಬಿದ್ದನು. ಆತನ ಅಣ್ಣನಾದ ತಪ್ಪಿಗೆ ಗೋರಾಅಧಿಕಾರಿಯ ಅವಮರ್ಜಿಗೆ ಒಳ ಗಾಗಿ ವಾಸುದೇವರಾಯನೂ ಕೆಲಸದಿಂದ ದೂರಮಾಡಲ್ಪಟ್ಟನು. ಇಷ್ಟೆಲ್ಲಅನರ್ಥಕ್ಕೆತಾನು ನೋಟನ್ನು ಸಿಗರೇಟಮಾಡಿದ್ದೇ ಕಾರಣವಾ ದ್ದರಿಂದ ಆತನು ಆ ದುಃಖಿತಕುಟುಂಬದವರ ಕಲ್ಯಾಣಾರ್ಥವಾಗಿ ಏನನ್ನಾದರೂ ಕೊಡಬೇಕೆಂದು ಯೋಚಿಸಿ ಈ ದಿನ ಬುದ್ಧಿಪೂರ್ವಕ ವಾಗಿ ಸೌಮಿತ್ರಿಗೆ ಕೊಡಲು ಪೆಟ್ಟಿಗೆಯನ್ನು ತಂದಿದ್ದನು.

ಸೌಮಿತ್ರಿಯು ಇದುವರೆಗೆ ಅವಿವಾಹಿತಳಾಗಿದ್ದಳಷ್ಟೇ; ಆಕೆ ಯು ರಾಕ್ಷಸೀ ಕನ್ಯೆಯೆಂದು ಜ್ಯೋತಿಷಿಗಳು ಹೇಳಿಬಿಟ್ಟದ್ದರಿಂದ ಅವ ಳನ್ನು ಇದುವರೆಗೆ ಯಾರೂ ಮದುವೆಯಾಗಿರಲಿಲ್ಲ ಶಂಕರರಾಯ

ನಿದ್ದಾಗ ಈ ಮಗಳ ವಿವಾಹದ ಬಗ್ಗೆ ಬಹಳ ಪ್ರಯತ್ನ ಮಾಡಿದನು. ಆದರೆ ಒಮ್ಮೆ ಜನರ ಮನಸ್ಸಿನಲ್ಲಿ ಭಯ ಹೊಕ್ಕು ಬಿಟ್ಟಿದ್ದರಿಂದ ಯಾರೂ ಆ ಹುಡಿಗೆಯನ್ನು ಮಾಡಿಕೊಳ್ಳಲಿಕ್ಕೆ ಒಪ್ಪಲಿಲ್ಲ. ಕಡೆಗೆ ಶಂಕರರಾಯನು ಬೇಸತ್ತು ಮೂರನೆಯ ಮಗಳಾದ ಮನೋರಮೆಯ ಲಗ್ನ ಮಾಡುವದನ್ನು ಗೊತ್ತುಮಾಡಿಸಿದನು. ಆಗ ಊರಿನಲ್ಲಿಗ್ಗ ಮೇಘಶ್ಯಾಮನು ವರನಾಗಿ ಆರಿಸಲ್ಪಟ್ಟಿದ್ದನು. ಆದರೆ ವಿವಾಹದ ಮುನ್ನಾದಿನ ರಾತ್ರಿಯಲ್ಲಿ ಮದುಮಗನು ಮಲಗಿದಲ್ಲಿಯೇ ಮಾಯವಾಗಿ ಕಂಕಣಕಟ್ಟಿದ ಆತನದೊಂದು ಕೈಮಾತ್ರ ಕೋಣೆಯಲ್ಲಿ ಬಿದ್ದಿತ್ತು. ಇದರಿಂದ ಮೇಘಶ್ಯಾಮನ ಕೊಲೆಯಾಗಿರಬೇಕೆಂದು ಜನರು ನಿರ್ಧರಿಸಿದರು. ಕರ್ಮಧರ್ಮ ಸಂಯೋಗದಿಂದ ಅದೇರಾತ್ರಿಯಲ್ಲಿ ಆ ಊರಿನಲ್ಲಿದ್ದ ಭೋಲಾ ಎಂಬ ಗವಳಿಗನ ಕೊಲೆಯೂ ಆಗಿತ್ತು. ಅದರಿಂದ ಜನರ ಅನುಮಾನವು ಹೆಚ್ಚಲಿಕ್ಕೆ ಕಾರಣವಾಯಿತು. ಈ ಭೋಲಾನ ಕೊಲೆಯೇ ನಮ್ಮ ವಾಚಕರ ಪೂರ್ವಪರಿಚಿತನಾದ ತ್ರಿವಿಕ್ರಮನ ಮೇಲೆ ಬಂದಿರುವ ಆರೋಪವು ಇರಲಿ.

ಹೀಗೆ ಸೌಮಿತ್ರಿಯು ಲಗ್ನವಾಗದೆ ಉಳಿದಿರಲು, ಆಕೆಯನ್ನು ನಮ್ಮ ಭೀಮರಾಯನು ಪ್ರೀತಿಸುತ್ತಿದ್ದನು. ಆಕೆಯನ್ನು ತನ್ನ ರಾಣಿಯನ್ನಾಗಮಾಡಿಕೊಳ್ಳುವ ಅಭಿಲಾಷೆಯು ಆತನಲ್ಲಿತ್ತು. ಆದರೂ ಜನವಾರ್ತೆಯಿಂದ ಅವನು ಸ್ವಲ್ಪ ಸ್ವಲ್ಪ ಹಿಂಜರೆಯುತ್ತಿದ್ದನು. ಒಮ್ಮೆಲೆ ಲಗ್ನ ಮಾಡಿಕೊಂಡು ಬಿಡಲಿಕ್ಕೂ ಆತನಿಗೆ ಧೈರ್ಯವಾಗಲೊಲ್ಲದು. ಪೂರ್ಣವಾಗಿ ಆಕೆಯ ಆಶೆಯನ್ನು ಬಿಡಲಿಕ್ಕೂ ಅವನ ಮನಸ್ಸು ಒಪ್ಪಲೊಲ್ಲದು. ಹೀಗಾಗಿ ಅವನು ಗುಪ್ತವಾಗಿಯೇ ಆಕೆಯನ್ನು ಪ್ರೀತಿಸುತ್ತಿದ್ದನು. ಆತನ ಈ ಗುಟ್ಟನ್ನು ಸೌಮಿತ್ರಿಯು ಕಂಡು ಹಿಡಿದಿದ್ದಳು. ಜ್ಯೋತಿಷಿಗಳ ದುರ್ಬೋಧದಿಂದ ತನಗೆ ಪತಿಯೇ ದೊರೆಯುವದಿಲ್ಲೆಂದು ನಿರ್ಧರಿಸಿದ್ದ ಆ ಸೌಭಾ

ಗ್ಯಕಾಂಕ್ಷಿಣಿಯು ಭೀಮರಾಯನಂಥ ಗರ್ಭಶ್ರೀಮಂತ ತರುಣನು ತನ್ನನ್ನು ಪ್ರೀತಿಸುತ್ತಿರುವಾಗ ಅವಳು ಉದಾಸೀನ ಮಾಡಬಹುದೇ? ಇಷ್ಟರ ಹೊರತು ಸುಶೀಲೆಯಾದ ಸೌಮಿತ್ರಿಯ ವಿಷಯವಾಗಿ ನಮ್ಮ ವಾಚಕರು ತಪ್ಪುತಿಳುವಳಿಕೆಯನ್ನು ಮಾಡಿಕೊಳ್ಳಬಾರದು.

ಈ ರೀತಿಯಾಗಿರುವ ಅವರ ಪರಸ್ಪರ ಪ್ರೇಮವು ಯಾರಿಗೂ ಗೊತ್ತಿರಲಿಲ್ಲ. ಈ ದಿನ ಆ ಭಾವೀ ದಂಪತಿಗಳ ಪ್ರೇಮವನ್ನು ಉಪ್ಪರಿಗೆಯಲ್ಲಿದ್ದ ಮಾಲತಿಯು ನೋಡಿದಳು. ಸೌಮಿತ್ರಿಗೆ ಭೀಮರಾಯನು ಪತಿಯಾಗುವನೆಂದು ಆಕೆಗೆ ತುಂಬಾ ಆನಂದವಾಯಿತು. ಇಷ್ಟೇ ಅಲ್ಲ, ಸುಲೋಚನೆ-ಮನೋರಮೆ ಮೊದಲಾದವರಿಗೂ ಆನಂದವಾಯಿತು. ಸಂಜೆಗೆ ವಾಸುದೇವರಾಯನು ಮನೆಗೆ ಬಂದನು. ಸೌಮಿತ್ರಿಯು ಕೊಟ್ಟ ಪೆಟ್ಟಿಗೆಯನ್ನು ಸುಲೋಚನೆಯು ಆತನ ಕಡೆಗೆ ಕೊಟ್ಟಳು. ವಾಸುದೇವರಾಯನು ಚಕಿತನಾಗಿ--ಇದು ಯಾರ ಪೆಟ್ಟಿಗೆಯು? ನನ್ನ ಕಡೆಗೆ ಯಾಕೆ ಕೊಟ್ಟಿರಿ? ಎಂದು ಕೇಳಿದನು. ಅದಕ್ಕೆ ಸುಲೋಚನೆಯು ಸೌಮಿತ್ರಿಯು ಹೇಳಿದ ಎಲ್ಲ ಸಂಗತಿಯನ್ನು ಹೇಳಿ ಪೆಟ್ಟಿಗೆಯನ್ನು ತೆರೆದು ನೋಡಲು ಸೂಚಿಸಿದಳು. ಆದರೆ ಆ ಪೆಟ್ಟಿಗೆಗೆ ಹಾಕಿದ ಕೀಲಿಯ ಕೈಯು ಭೀಮರಾಯನ ಹತ್ತಿರವೇ ಇದ್ದದರಿಂದ ಪರರ ಪೆಟ್ಟಿಗೆಯನ್ನು ಅವರಿಲ್ಲದಾದ ತೆಗೆಯಲಿಕ್ಕೆ ವಾಸುದೇವರಾಯನು ಒಪ್ಪಲಿಲ್ಲ ಭೀಮರಾಯನು ಪೆಟ್ಟಿಗೆಯನ್ನು ನಮಗೇ ಕೊಟ್ಟು ಬಿಟ್ಟಿರುವನೆಂದು ಸುಲೋಚನೆಯು ಎಷ್ಟು ಹೇಳಿದರೂ ಆತನು ಕೇಳಲಿಲ್ಲ. ಕಡೆಗೆ ಮಹಾದೇವನೆಂಬ ಆತನ ತಮ್ಮನು ಬಹಳ ಆಗ್ರಹ ಮಾಡಿದ್ದರಿಂದ ಕೀಲಿಯನ್ನು ಮುರಿದು ಪೆಟ್ಟಿಗೆಯನ್ನು ತೆರೆದನು. ಅದರಲ್ಲಿ ಹತ್ತುಸಹಸ್ರ ರೂಪಾಯಿ ಬೆಲೆ ಬಾಳುವ ಕರನ್ಸೀ ನೋಟುಗಳಿದ್ದು ಭೀಮರಾಯನ ಹಸ್ತಲಿಖಿತವಾದ ಒಂದು ಪತ್ರವೂ ಇತ್ತು. ವಾಸುದೇವರಾಯನು ವಿಸ್ಮಯ

ಪಡುತ್ತ ಆ ಪತ್ರವನ್ನು ಓದತೊಡಗಿದನು:—

"ಪ್ರಿಯ ವಾಸುದೇವರಾವ,

ನಿಮ್ಮೆಲ್ಲರ ದುಃಖಕ್ಕೆ ಮೂಲಕಾರಣನು ನಾನಿರುತ್ತೇನೆ. ಆದ್ದರಿಂದ ನನ್ನ ಮೇಲೆ ದಯವಿಟ್ಟು ಈ ಅಲ್ಪ ಕಾಣಿಕೆಯನ್ನು ಸ್ವೀಕರಿಸಬೇಕು. ನನ್ನ ಮಿತ್ರನು ಕಾರಾಗೃಹದಿಂದ ಮುಕ್ತನಾಗಬೇಕೆಂದು ನಾನು ಮಾಡಿದ ಪ್ರಯತ್ನಗಳೆಲ್ಲ ನಿಷ್ಫಲವಾದವು. ಆದ್ದರಿಂದ ಆತನು ಕಾರಾಗೃಹವನ್ನು ಬಿಟ್ಟು ಬರುವವರೆಗೆ ನಾನಾದರೂ ದೇಶತ್ಯಾಗ ಮಾಡಬೇಕೆಂದು ನಿಶ್ಚಯಿಸಿರುತ್ತೇನೆ. ನೀವು ನನ್ನ ವಿಷಯವಾಗಿ ಚಿಂತೆಯನ್ನು ಮಾಡಬಾರದು; ಹಾಗು ನನ್ನನ್ನು ಹುಡುಕುವ ಗೊಂದಲದಲ್ಲಿಯೂ ಬೀಳಬಾರದು. ಯಾಕೆಂದರೆ ನಾನು ವಿಲಾಯತಿಯ ಕಡೆಗೆ ಹೋಗುತ್ತೇನೆ.

ತಮ್ಮ,
ಭೀಮರಾವ."

ಪತ್ರ ಓದುವದಾದ ಮೇಲೆ ವಾಸುದೇವರಾಯನು ನಕ್ಕು— "ಭೀಮರಾಯನು ಹುಚ್ಚನಿದ್ದಾನೆ. ಅವನ ಹಣವನ್ನು ಅವನಿಗೆ ತಿರುಗಿ ಕೊಡಲಿಕ್ಕೆಬೇಕು," ಎಂದು ನುಡಿದನು. ತನ್ನ ನೌಕರಿಯು ಹೋಯಿತು, ತಮ್ಮನು ಬಂದೀಖಾನೆಯಲ್ಲಿ ಬಿದ್ದನು, ಮನೆಯಲ್ಲಿ ಯಾವ ಆಸ್ತಿಪಾಸ್ತಿಗಳೂ ಇಲ್ಲ ಪ್ರತಿನಿತ್ಯ ೮-೧೦ ಜನರ ಚರಿತಾರ್ಥವೂ ಸಾಗಬೇಕು. ಇಂಥ ವಿಪತ್ತಿನ ಸ್ಥಿತಿಯಿದ್ದರೂ ಆ ಪಾಪಭೀರುವಾದ ವಾಸುದೇವರಾಯನು ಭೀಮರಾಯನು ಕೊಟ್ಟಿರುವ ನೋಟುಗಳನ್ನು ಉಪಯೋಗಿಸಿಕೊಳ್ಳಲಿಕ್ಕೆ ಮನಸ್ಸು ಮಾಡಲಿಲ್ಲ. ನಿಜವಾದ ಸಭ್ಯಗೃಹಸ್ಥರು ಎಂಥ ವಿಪತ್ತಿನಲ್ಲಾದರೂ ಸತ್ಯಗೆಡರು. ಅಸಭ್ಯಜನರು ಮಾತ್ರ, ನ್ಯಾಯಾನ್ಯಾಯಗಳನ್ನು ಲೆಕ್ಕಿಸದೆ ಕೈಗೆ ಸಿಕ್ಕದ್ದನ್ನು ಉಪಭೋಗಿಸುತ್ತ ಪಶುಸದೃಶರಾಗಿ ಬಾಳುವರು.

ವಾಸುದೇವರಾಯನು ಕೂಡಲೆ ಮಹಾದೇವನ ಸಂಗಡ ಆ ಎಲ್ಲ ನೋಟುಗಳನ್ನು ಭೀಮರಾಯನ ಮನೆಗೆ ಕಳಿಸಿಕೊಟ್ಟನು. ಆದರೆ ಮಹಾದೇವನು ಕೆಲಹೊತ್ತಿನ ಮೇಲೆ ತಿರುಗಿ ಬಂದು "ಭೀಮರಾಯನು ಮನೆಯಲ್ಲಿ ಮುಂಬೈಗೆ ಹೋಗುತ್ತೇನೆಂದು ಹೇಳಿ ಹೋಗಿರುವನೆಂದೂ, ಕಾಲಿಂದಿಯು ಶೋಕಮಾಡುತ್ತಿರುವಳೆಂದೂ, ಸುತ್ತಲೂ ಹುಡುಕಲಿಕ್ಕೆ ಆಳುಗಳು ಹೋಗಿರುವವೆಂದೂ" ಸುದ್ದಿ ತಂದನು. ಬಳಿಕ ವಾಸುದೇವರಾಯನು ಆ ನೋಟುಗಳನ್ನು ಮೈಸೂರ ಬ್ಯಾಂಕಿನಲ್ಲಿ ಭೀಮರಾಯನ ಹೆಸರಿನಿಂದ ಜಮೆ ಮಾಡಿಸಿ, ತನ್ನ ನಿಸ್ಪೃಹಧರ್ಮವನ್ನು ಜಗತ್ತಿಗೆ ತೋರಿಸಿಕೊಟ್ಟನು!

---

## [ 7 ]

ಈ ಸಂಗತಿಯು ಸಂಭವಿಸಿದ ಮೇಲೆ ಒಂದು ವರುಷವು ಹಾಹಾ ಅನ್ನುವಷ್ಟರಲ್ಲಿ ಕ್ರಮಿಸಿತು. ವೈಶಾಖಮಾಸದ ಪ್ರಾರಂಭ; ಭಗವಾನ್ ಸೂರ್ಯನಾರಾಯಣನು ಪ್ರಖರಕಿರಣಗಳನ್ನು ಧರಿಸಿ ಭೂಮಂಡಲವನ್ನೆಲ್ಲ ತಪಿಸುತ್ತಿದ್ದನು. ಮಧ್ಯಾಹ್ನದ ಸಮಯವಾಗಿತ್ತು. ಆ ಕಾಲದಲ್ಲಿ ಶ್ರೀರಂಗಪಟ್ಟಣದ ಕಾವೇರಿ ತೀರದಲ್ಲಿ ಮಳಲ ಪ್ರದೇಶದ ಮೇಲೆ ಒಬ್ಬ ಬಾಲಿಕೆಯು ಪಾತ್ರೆಗಳನ್ನು ತಿಕ್ಕುತ್ತ ಕುಳಿತಿದ್ದಳು. ಅವಳ ವಯಸ್ಸು ೧೨-೧೪ ವರುಷಗಳದ್ದಿರಬಹುದು. ಮುಖವು ಬಲು ಸುಂದರ; ಅವಯವಗಳು ಯಂತ್ರದಲ್ಲಿ ಕೊರೆದಂತೆ ಬಹುಮಾಟ; ಮುಖಚರ್ಯ, ದೇಹರಚನೆ ಇವುಗಳಿಂದ ಅವಳು ಗರ್ಭಶ್ರೀಮಂತರ ಮನೆಯವಳಿರಬಹುದೆಂದು ತಟ್ಟನೆ ಹೊಳೆಯುತ್ತಿತ್ತು. ಆದರೆ ಅದರಂತೆ ಮೈಮೇಲಿನ ಹರಕುಬಟ್ಟೆ, ಅವಳು ಮಾಡುತ್ತಿದ್ದ ಕೆಲಸ ಇವುಗಳಿಂದ ಆಕೆಗೆ ಬಂದ ವಿಪತ್ತೂ ಗೊತ್ತಾಗದೆ ಇರುತ್ತಿದ್ದಿಲ್ಲ.

ಮಧ್ಯಾಹ್ನದ ಸಮಯವಿದ್ದದರಿಂದ ಆ ನದಿಯಲ್ಲಿ ಆಗ ಮನುಷ್ಯಮಾತ್ರರ ಸಂಚಾರವಿದ್ದಿಲ್ಲ; ಆಗ ಗಂಭೀರವಾದ ನದಿಯಲ್ಲಿ ಸಣ್ಣ ದೊಡ್ಡ ಡೋಣಿಗಳು ಮಾತ್ರ ಪ್ರತಿಬಂಧಿಸಿ ಇಡಲ್ಪಟ್ಟಿದ್ದವು. ನಮ್ಮ ಆ ಬಾಲಿಕೆಯು ಪಾತ್ರೆಗಳನ್ನು ತೊಳೆ ತೊಳೆದು ಒಂದು ಬಂಡೆಗಲ್ಲಮೇಲೆ ಇಡುತ್ತಿರಲು, ಪ್ರಚಂಡವಾದ ಬಿರುಗಾಳಿಯು ಬೀಸಿತು. ನದಿಯೊಳಗಿನ ಮಳಲಕಣಗಳು ಚಕ್ರಾಕಾರವಾಗಿ ತಿರುಗುತ್ತ ಬಹುದೊಡ್ಡ ಸ್ತಂಭಾಕೃತಿಯನ್ನು ಹೊಂದಿದವು. ಕಸಕಡ್ಡಿ ಉಸುಕು ಮೊದಲಾದವುಗಳು ಸ್ಥಾನಭ್ರಷ್ಟವಾಗಿ ಹವೆಯಲ್ಲಿ ಹಾರಾಡುತ್ತಿರಲು, ಮೇಲೆ ಹೇಳಿದ ಬಾಲಿಕೆಯು ಗಟ್ಟಿಯಾಗಿ ಕಣ್ಣು ಮುಚ್ಚಿಕೊಂಡಳು. ಚಂಡಮಾರುತನು ಕ್ಷಣದಲ್ಲಿ ಪ್ರಾಣಿಗಳನ್ನು ತಲ್ಲಣಿಸಿ ಬಿಟ್ಟನು. ಗಾಳಿಯ ವೇಗವು ಕಡಿಮೆಯಾದಬಳಿಕ ಬಾಲಿಕೆಯು ಕಣ್ಣುತೆರೆದು ನೋಡುತ್ತಾಳೆ, ತಾನು ತಿಕ್ಕಿ ಇಟ್ಟಿರುವ ಪಾತ್ರೆಗಳಲ್ಲಿ ಒಂದು ಸುಂದರವಾದ ಕಲಶವು ತನ್ನಿಂದ ನಾಲ್ಕಾರು ಮೊಳ ಅಂತರದಲ್ಲಿ ನೀರಿನ ಮೇಲೆ ತೇಲುತ್ತಿತ್ತು. ಅವಳ ಎದೆಯು ಧಸ್ಸೆಂದಿತು. ಮೈಯು ನಡುಗಹತ್ತಿತು; ಮುಖವು ದೀನವಾಯಿತು. ಕಣ್ಣುಗಳು ಅಶ್ರುಗಳನ್ನು ಧರಿಸಿದವು. ಬಹಳ ಹೇಳುವದೇನು? ಆ ಬಿರುಗಾಳಿಯಿಂದ ಅವಳ ಮೇಲೆ ಆಕಾಶವು ಕಳಚಿ ಬಿದ್ದಂತಾಯಿತು. ಅವಳು ದೊಡ್ಡ ದನಿಯಿಂದ ಅಳತೊಡಗಿದಳು. ನೀರು ಆಳವಾಗಿದ್ದದರಿಂದ ಅವಳಿಗೆ ನೀರಿನಲ್ಲಿ ಇಳಿದು ಕಲಶವನ್ನು ಹಿಡಿಯುವ ಧೈರ್ಯವಾಗಲೊಲ್ಲದು. ತೆರೆಗಳ ಪ್ರೋತ್ಸಾಹದಿಂದ ಕಲಶವು ಬಾಲಿಕೆಯನ್ನು ಬಿಟ್ಟು ದೂರ ದೂರ ಸರಿಯತೊಡಗಿತು. ಕಲಶವು ದೂರ ಸರಿದಂತೆ ಬಾಲಿಕೆಯ ದುಃಖವು ಹೆಚ್ಚಿತು. ಅವಳು ಕಲಶವು ಕೈಬಿಟ್ಟಿತೆಂದು ತಿಳಿದು ತನ್ನ ಭಾವೀಸಂಕಟವನ್ನು ಸ್ಮರಿಸಿ ದೇವರಿಗೆ ಮೊರೆ ಇಡಲಾರಂಭಿಸಿದಳು.

ದೇವರು ಅನಾಥರಕ್ಷಕನೆಂಬ ಮಾತು ಅನಾದಿಯಿಂದ ಸಿದ್ಧನಾದದ್ದಷ್ಟೇ; ಬಾಲಿಕೆಯ ಕರುಣಾಸ್ವರಕ್ಕೆ ದೇವರಿಗೆ ದಯಹುಟ್ಟಿದ್ದರೂ ಹುಟ್ಟಿರಬಹುದು. ಪ್ರತಿಬಂಧಿಸಿ ಇಡಲ್ಪಟ್ಟದ್ದ ದೋಣಿಗಳಲ್ಲಿ ಒಂದು ದೊಡ್ಡ ದೋಣಿಯು ಇತ್ತು. ಅದರಲ್ಲಿ ಒಬ್ಬ ತರುಣನು ಕುಳಿತುಕೊಂಡಿದ್ದು ಆ ಬಾಲಿಕೆಯನ್ನು ಎವೆಯಿಕ್ಕದೆ ನೋಡುತ್ತಿದ್ದನು. ತರುಣನು ಸುಂದರನಿದ್ದನು. ವಯಸ್ಸು ಇಪ್ಪತ್ತು ಇಪ್ಪತ್ತೆರಡರ ಒಳಹೊರಗೆ ಇರಬಹುದು. ಆತನು ಶ್ರೀಮಂತನಿದ್ದನು. ಅದಕ್ಕೆ ತಕ್ಕಂತೆ ಅವನ ಪೋಷಾಕು ಬಹು ಭವ್ಯವಾಗಿತ್ತು. ಅವನು ಬಾಲಿಕೆಯ ಎಲ್ಲ ಕೃತಿಗಳನ್ನು ನೋಡುತ್ತಿದ್ದು ಅವಳ ಕಲಶವು ನೀರಿನಲ್ಲಿ ತೇಲಹತ್ತಿದಾಗ ಅವಳಿಗಾದ ದುಃಖವನ್ನು ಕಂಡು, ಅವನು ವೇಗದಿಂದ ಬಾಲಿಕೆಯ ಬಳಿಗೆ ಬಂದು ಅವಳ ದುಃಖದ ಕಾರಣವನ್ನು ವಿಚಾರಿಸಿದನು.

ಬಾಲಿಕೆಯು—"ಹಾಯ್! ನನ್ನ ಕಲಶವು..........."

ತರುಣ—ಹ! ಈ ಯಃಕಶ್ಚಿತ ಕಲಶದ ಸಲುವಾಗಿ ಇಷ್ಟು ಅಳುವೆಯಾ?

ಬಾಲಿಕೆ—ಕಲಶವು ನನ್ನದಲ್ಲ; ಅದರ ಒಡೆಯರು ನನ್ನ ಪ್ರಾಣವನ್ನು ತಕ್ಕೊಳ್ಳುವರು.

ತರುಣ(ಆಶ್ಚರ್ಯದಿಂದ)-- ನಿನ್ನನ್ನು ಹೊಡೆಯುವರೇ; ಅವರು ರಾಕ್ಷಸರೇನು? ನಿಜವಾಗಿ ರಾಕ್ಷಸರಿರಬಹುದು! ಅಂತೆಯೇ ನಿನ್ನಂಥ ಸುಕುಮಾರಿಯ ಮೇಲೆ ಕೈಮಾಡುವರು! ಶಿವ ಶಿವ! ನೀನು ಯಾರ ಮನೆಯಲ್ಲಿ ಚಾಕರಿಯನ್ನು ಮಾಡುವಿ?

ಬಾಲಿಕೆ—ಹಾಯ್! ನನ್ನ ಕಲಶವು ದೂರ ಹೋಯಿತು. ನಾನು ಸತ್ತೆನು!!

ಬಾಲಿಕೆಯ ಈ ವಾಕ್ಯವನ್ನು ಕೇಳಿ ತರುಣನು, ತನ್ನ ಮೈ

ಮೇಲಿನ ಬಟ್ಟೆಗಳನ್ನು ಕಳೆದು ನೀರಿನಲ್ಲಿ ಈಸು ಬಿದ್ದು ಕಲಶವನ್ನು ತಕ್ಕೊಂಡು ಬಂದನು.

ಕಲಶವು ಸಿಕ್ಕದ್ದರಿಂದ ಬಾಲಿಕೆಗಾದ ಆನಂದವನ್ನು ವರ್ಣಿಸ ಲಾಸಲ್ಲ; ಸಂಸಾರದೊಳಗಿನ ಎಲ್ಲ ಸಂಪತ್ತುಗಳನ್ನು ಒದಗಿಸಿ ಕೊಟ್ಟರೂ ಆಗದಷ್ಟು ಆನಂದವು ಆಗ ಆಕೆಗಾಯಿತೆಂದು ಹೇಳಬಹುದು. ಆಕೆಯು ತರುಣನನ್ನು ಕೃತಜ್ಞತೆಯಿಂದ ದಿಟ್ಟಿಸಿ ನೋಡಿದಳು. ಕಲಶವನ್ನು ತಂದು ಕೊಟ್ಟ ಮನುಷ್ಯನು ಸಾಮಾನ್ಯನಿರದೆ ಸುಸ್ವ-ರೂಪಿಯೂ, ತರುಣನೂ, ಶ್ರೀಮಂತನೂ ಆಗಿರುವನೆಂದು ಆಕೆಯು ಕಂಡು ಹಿಡಿದಳು. ಮುಂದೆ ಕೆಲಹೊತ್ತಿನ ಮೇಲೆ ತರುಣನು—

ತರುಣ—ನೀನು ಯಾರ ಮನೆಯಲ್ಲಿ ಚಾಕರಿಯನ್ನು ಮಾಡುತ್ತಿರುವೆ?

ಬಾಲಿಕೆ—ಒಬ್ಬ ಬ್ರಾಹ್ಮಣ ಧನಿಕನ ಮನೆಯಲ್ಲಿ!

ತರುಣ—ಅವರು ನಿನಗೆ ಬಹಳ ತ್ರಾಸ ಕೊಡುವರೇನು?

ಬಾಲಿಕೆ—ಹೌದು, ಅವರು ನನಗೆ ಅತಿಶಯವಾಗಿ ತ್ರಾಸ ಕೊಡುತ್ತಾರೆ. ಸಣ್ಣ ಸಣ್ಣ ತಪ್ಪಿಗಾಗಿ ಸಹ ಅವರು ನನ್ನನ್ನು ಮನಸೋಕ್ತವಾಗಿ ಬಡಿಯುತ್ತಾರೆ. ನಾನು ಈ ಮೊದಲು ಒಂದು ದಿನ ಒಂದು ಸಣ್ಣ ಹಿತ್ತಾಳಿಯ ಪೇಲಿಯನ್ನು ಕಳೆದಿದ್ದೆನು. ಅದಕ್ಕಾಗಿ ಅವರು ನನಗೆ ಶಿಕ್ಷಿಸಿದ ರೀತಿಯನ್ನು ವರ್ಣಿಸಲಾರೆನು. ಇಕೋ, ನೋಡಿರಿ ನನ್ನ ಬೆನ್ನನ್ನು! ಎಂದು ನುಡಿದು ಅವಳು ಆತನಿಗೆ ತನ್ನ ಬೆನ್ನು ತೋರಿಸಿದಳು. ಆಕೆಯ ಬೆನ್ನ ಮೇಲೆ ಮೂಡಿದ ಚಿತ್ತದ ಬಾಸಾಳಗಳನ್ನು ನೋಡುವದು ಆ ತರುಣನಿಂದಾಗಲಿಲ್ಲ. ಅವನ ಹೃದಯವು ಕಳವಳಿಸಿತು. ಅಗ ಅವನು ಆಕೆಯ ಹೆಸರನ್ನೂ ಅವಳು ದುಡಿಯುತ್ತಿರುವ ಮನೆಯ ಹೆಸರನ್ನೂ ಕೇಳಿಕೊಂಡು ತನ್ನ ನಾವೆಯಕಡೆಗೆ ತೆರಳಿದನು ಬಾಲಿಕೆಯು ಪಾತ್ರೆಗಳನ್ನು ತಕ್ಕೊಂಡು

ತನ್ನ ಯಜಮಾನನ ಮನೆಯು ಕಡೆಗೆ ನಡೆದಳು.

ಪ್ರಿಯವಾಚಕರೇ, ಬಾಲಿಕೆಯು ಕಲಶವನ್ನು ತೆಗೆದುಕೊಟ್ಟು ಆಕೆಯ ಕೃತಜ್ಞತೆಗೆ ಪಾತ್ರನಾದ ಆ ತರುಣನು ಯಾರಿರಬಹುದು? ಬಾಲಿಕೆಯಾದರೂ ಯಾರಿರಬಹುದು? ಅವರು ಯಾರೇ ಇರಲಿ; ಅವರ ಪರಿಚಯವಾಗುವ ವರೆಗೆ ನಾವು ಆ ತರುಣನನ್ನು ಬಾಬಾಸಾಹೇಬ ನೆಂದು ಕರೆಯೋಣ.

ತನ್ನ ನೌಕೆಯು ಬಳಿಗೆ ಹೋಗಿ ಬಾಬಾಸಾಹೇಬನು ಸೇವಕನ ಸಹಾಯದಿಂದ ತನ್ನ ಮೈಮೇಲಿನ ಪೋಷಾಕನ್ನು ಬದಲಿಸಿದನು. ಬಳಿಕ ಅವನು ನದೀತೀರವನ್ನು ಬಿಟ್ಟು ಬಾಲಿಕೆಯು ಹೇಳಿದ ಬ್ರಾ-ಹ್ಮಣ ಧನಿಕನ ಮನೆಯ ಹಾದಿಯನ್ನು ಹಿಡಿದನು. ಸ್ವಲ್ಪ ಹೊತ್ತಿನಲ್ಲಿ ಅವನಿಗೆ ಒಂದು ದೊಡ್ಡ ಮನೆಯು ಕಂಡಿತು. ಅದಕ್ಕೆ ಮನೆಯನ್ನುವದಕ್ಕಿಂತ 'ವಾಡೆ'ಯೆಂದರೆ ಹೆಚ್ಚು ಶೋಭಿಸುತ್ತಿತ್ತು. ಹೆಬ್ಬಾಗಿಲದ ಬಳಿಯಲ್ಲಿ ಕಾವಲುಗಾರರು ತಂಬಾಕ ಸೇದುತ್ತ ಕುಳಿತಿದ್ದರು. ಬಹುತರವಾಗಿ ಇದೇ ಮನೆಯೇ ಆ ಬ್ರಾಹ್ಮಣ ಧನಿಕನ ಮನೆಯಾಗಿರಬಹುದೆಂದು ನಮ್ಮ ಬಾಬಾಸಾಹೇಬನು ತರ್ಕಿಸಿದನು. ಅಲ್ಲಿಯ ಕಾವಲುಗಾರರನ್ನು ವಿಚಾರಿಸಲಿಕ್ಕೆ ಅವನಿಗೆ ಪ್ರಶಸ್ತವೆನಿಸದ್ದರಿಂದ ಅವನು ಚತುರ್ದಿಕ್ಕುಗಳನ್ನು ನೋಡಿದನು. ವಾಡೆಯ ಎದುರಿಗೆ ಒಂದು ಉಪಾಹಾರ ಗೃಹವಿದ್ದಂತೆ ತೋರಿತು. ಕೂಡಲೆ ಆತನು ಅಲ್ಲಿಗೆ ಹೋದನು. ಯಾವನೋ ಒಬ್ಬ ಶ್ರೀಮಂತ ತರುಣನು ತನ್ನ ಉಪಾಹಾರ ಮಂದಿರಕ್ಕೆ ಬರುವನೆಂದು ಅಂಗಡಿಕಾರನು ಸಂ-ತೋಷಬಟ್ಟು ಅವನು ಬಂದಕೂಡಲೆ ವಿನಯದಿಂದ ನಮಸ್ಕರಿಸಿ— ಸರಕಾರ, ತಮಗೇನು ಬೇಕು? ಎಂದು ಪ್ರಶ್ನೆ ಮಾಡಿದನು.

ಬಾಬಾಸಾಹೇಬ—ಉಪಾಹಾರಮಾಡಬೇಕಾಗಿರುವದು. ನಿನ್ನ ಅಂಗಡಿಯಲ್ಲಿ ಯಾವ ಯಾವ ಪದಾರ್ಥಗಳು ಉತ್ತಮವಿರುವವು?

ಅಂಗಡಿಕಾರ—ಎಲ್ಲ ಪದಾರ್ಥಗಳೂ ಉತ್ತಮವಿರುವವು; ಘೀವರ, ಮೋತೀಚೂರ, ಬಾಸುಂದಿ, ಶ್ರೀಖಂಡ, ಜಿಲೇಬಿ, ಪುರಿ.

ಬಾಬಾಸಾಹೇಬ—ಇದೇನು? ಶಿರಾ ಎಂಬಂತೆ ಕಾಣುತ್ತದೆ.

ಅಂಗಡಿಕಾರ—ಹೌದು ಸರಕಾರ! ಇದು ಈಗಲೆ ಒಲೆಯ ಮೇಲಿಂದ ಇಳಿಸಲ್ಪಟ್ಟಿರುವದು. ಒಳ್ಳೇ ಬಿಸಿ ಬಿಸಿಯಾಗಿರುವದು.

ಬಾಬಾಸಾಹೇಬ—ಉತ್ತಮವಾಯಿತು. ನನಗೆ ಅದೇ ಬೇಕು. ಇಲ್ಲಿಯೇ ಹೊರಗೆ ಕುಳಿತು ಉಪಾಹಾರ ಮಾಡಬಹುದಲ್ಲವೇ? ಎಂದು ನುಡಿದು ಅಂಗಡಿಕಾರನ ಕೈಯಲ್ಲಿ ಒಂದು ರೂಪಾಯಿ ಹಾಕಿದನು.

ಅಂಗಡಿಕಾರ—ತಮ್ಮ ಇಚ್ಛೆಯಿದ್ದಂತೆ ಮಾಡಲಿಕ್ಕೆ ಅಡ್ಡಿಯಿಲ್ಲ. ಒಂದು ರೂಪಾಯಿಯ ಶಿರಾಕೊಡಲ್ಯಾ?

ಬಾಬಾಸಾಹೇಬ—ಛೇ; ನಿನ್ನಲ್ಲಿ ಬಿಸಿ ಬಿಸಿ ಪದಾರ್ಥಗಳಿದ್ದದ್ದಕ್ಕಾಗಿ ನಿನಗೆ ಈ ರೂಪಾಯಿಯನ್ನು ಇನಾಮಾಗಿ ಕೊಟ್ಟಿರುತ್ತೇನೆ.

ಅಂಗಡಿಕಾರನ ಸಂತೋಷಕ್ಕೆ ಮೇರೆಯುಳಿಯಲಿಲ್ಲ; ಅವನು ಒಂದು ತಾಟಿನಲ್ಲಿ ಯಥೇಷ್ಟವಾಗಿ ಶಿರಾ ಹಾಕಿ ಬಾಬಾಸಾಹೇಬನ ಮುಂದೆ ತಂದಿಟ್ಟನು. ತಿನ್ನುತ್ತ ತಿನ್ನುತ್ತ ಬಾಬಾಸಾಹೇಬನು ಅಂಗಡಿಕಾರನನ್ನು ಕುರಿತು ಎದುರಿಗಿನ ವಾಡೆಯ ಕಡೆಗೆ ಬೆರಳು ಮಾಡಿ—ಈ ಮನೆಯು ಯಾರದು? ಎಂದು ಕೇಳಿದನು.

ಅಂಗಡಿಕಾರ—ಸರಕಾರ, ಈ ಮನೆಯು ಒಬ್ಬ ದೊಡ್ಡ ಜಮೀನದಾರನದಿರುತ್ತದೆ. ಆತನು ಜಾತಿಯಿಂದ ಬ್ರಾಹ್ಮಣನಿರುತ್ತಾನೆ. ಅವನಿಗೆ ಇಬ್ಬರು ಮಕ್ಕಳಿದ್ದು, ಹಿರಿಯ ಮಗನು ಈ ಊರಿನಲ್ಲಿ ಆನರರೀ ಮ್ಯಾಜಿಸ್ಟ್ರೇಟನಿರುತ್ತಾನೆ.

ಬಾಬಾಸಾಹೇಬ—ಹಾಗಾದರೆ ಈ ಮನೆಯಲ್ಲಿ ಒಬ್ಬ

ಸುಂದರಬಾಲಿಕೆಯು ಕೆಲಸಮಾಡುತ್ತಿರುವಳಲ್ಲವೇ? ಆಕೆಯು ಈದಿನ ಮಧ್ಯಾಹ್ನದಲ್ಲಿ ನದಿಗೆ ಪಾತ್ರೆಗಳನ್ನು ತಿಕ್ಕುವದಕ್ಕಾಗಿ ಬಂದಿದ್ದಳು. ಅವಳದೊಂದು ಕಲಶವು ನೀರಿನಲ್ಲಿ ಬಿತ್ತು; ಆಕೆಯು ದೊಡ್ಡದನಿಯಿಂದ ಅಳಹತ್ತಿದಳು. ಆಗ ನಾನು ಅಲ್ಲಿಯೇ ಇದ್ದದರಿಂದ ಅದನ್ನು ತೆಗೆದುಕೊಟ್ಟೆನು. ಬಾಲಿಕೆಯು ಸುಶೀಲಳಿರುವಳು. ಮುಖಚರ್ಯದ ಮೇಲಿಂದ ಅವಳು ದೊಡ್ಡ ಮನೆತನಸ್ಥಳಾಗಿದ್ದು, ಮಹಾ ವಿಪತ್ತಿಗೆ ಗುರಿಯಾಗಿ ಆಕೆಯು ಈ ಪರದಾಸ್ಯವನ್ನು ಮಾಡಲಿಕ್ಕೆ ಬಂದಂತೆ ತೋರುತ್ತದೆ. ಆಕೆಯು ಯಾರ ಮನೆಯವಳು? ನಿನಗೇನಾದರೂ ಗೊತ್ತಿರುವದೇನು?

ಬಾಬಾಸಾಹೇಬನ ಈ ಮಾತುಗಳಿಂದ ಅಂಗಡಿಕಾರನು ತನ್ನ ಮನಸ್ಸಿನಲ್ಲಿ—ಬಾಲಿಕೆಯ ವಿಷಯವಾಗಿ ವಿಚಾರಿಸುವ ಈತನು ವಯಸ್ಸಿನಿಂದ ೨೦-೨೨ ವರ್ಷದ ತರುಣನಿದ್ದು ಚಲುವನೂ ಶ್ರೀಮಂತನೂ ಇರುವನು ಈಗಿನ ಕಾಲದ ಪರಿಸ್ಥಿತಿಗನುಸರಿಸಿ ಇವನು ವಿಷಯಲಂಪಟನಿರಬಹುದು. ಇವನ ಇಚ್ಛೆಗೆ ಸರಿಯಾಗಿ ಮಾತಾಡಿ ಏನಾದರೂ ಬಕ್ಷೀಸನ್ನು ಎತ್ತಿಹಾಕೋಣ! ಎಂದು ಯೋಚಿಸಿ ಬಾಬಾಸಾಹೇಬನನ್ನು ಕುರಿತು—

ಅಂಗಡಿಕಾರ—ನೀವು ಕೇಳುವ ಬಾಲಿಕೆಯ ವಿಷಯವು ನನಗೆ ಗೊತ್ತಿರುವದು. ಅಗೋ ಅಲ್ಲಿ ದೂರದಲ್ಲಿ ಒಂದು ಮುರುಕ ಮನೆಯು ಕಾಣುತ್ತದಷ್ಟೇ; ಅಲ್ಲಿ ಹಲವು ಜನ ರೂಪಸಂಪನ್ನರಾದ ಯುವತಿಯರಿರುತ್ತಾರೆ............

ಬಾಬಾಸಾಹೇಬ(ನಡುವೇ ಬಾಯಿ ಹಾಕಿ)—ಡ್ಯಾಮ್, ನಾನು ಆ ಬಾಲಿಕೆಯ ಸಂಬಂಧವಾಗಿ ವಿಚಾರಿಸುತ್ತೇನೆ. ಉಳಿದ ಸಂಗತಿಯು ನನಗೆ ಬೇಕಾಗಿಲ್ಲ.

ಅಂಗಡಿಕಾರ—ಸರಕಾರ, ನಾನಾದರೂ ಆ ಬಾಲಿಕೆಯ

ಸಂಬಂಧವಾಗಿಯೇ ಹೇಳುತ್ತೇನೆ. ಅದೇ ಮನೆಯಲ್ಲಿ ಆ ಹುಡುಗೆಯು ಇರುತ್ತಾಳೆ.

ಬಾಬಾಸಾಹೇಬ—ಒಳ್ಳೇದು; ಆ ಹುಡುಗೆಯ ಹೆಸರೇನು? ಆ ಹೆಂಗಸರು ಅವಳಿಗೇನಾಗಬೇಕು?

ಅಂಗಡಿಕಾರ (ತನ್ನ ಶಂಕೆಯು ನಿಜವೆಂದು ಭಾವಿಸಿ)—ಮಹಾರಾಜ, ಆ ಹುಡುಗಿಯ ಹೆಸರು ಜಾನಕಿ; ಅವರೆಲ್ಲರೂ ಯಾವದೋ ಒಂದು ಪಟ್ಟಣದಿಂದ ಇಲ್ಲಿಗೆ ಒಂದು ನಿಂತಿರುತ್ತಾರೆ. ಅವರ ಸಂಗಡ ಗಂಡಸರು ಯಾರೂ ಇರುವದಿಲ್ಲ. ಒಟ್ಟಿಗೆ ನಾಲ್ಕೈದು ಜನ ಹೆಂಗಸರಿರುವರು! ಅವರು ಬಹುತರವಾಗಿ ಮನೆಬಿಟ್ಟು ಹೊರಬೀಳುವದಿಲ್ಲ. ನೀವು ಶೋಧಮಾಡುತ್ತಿರುವ ಹುಡುಗಿಯು ಮಾತ್ರ ಈ ಎದುರಿಗಿನ ಮನೆಯಲ್ಲಿ ಕೆಲಸಮಾಡುತ್ತಿರುವಳು. ಸರಕಾರ, ನಿಜವಾಗಿಯೂ ಆ ಸ್ತ್ರೀಯರು ಕಷ್ಟದಲ್ಲಿರುತ್ತಾರೆ. ಅವರು ದೊಡ್ಡ ಮನೆತನದ ಹೆಂಗಸರೆಂಬಂತೆ ತೋರುತ್ತದೆ. ಅವರ ನಡೆನುಡಿಗಳು ಚನ್ನಾಗಿರುತ್ತವೆ ಎಷ್ಟೋಜನ ದುಷ್ಟರು ಅವರನ್ನು ಮೋಸಗೊಳಿಸಬೇಕೆಂದು ಪ್ರಯತ್ನ ಮಾಡಿದರು. ಆದರೆ ಆ ಸ್ತ್ರೀಯರು ಯಾರ ಮೋಸಕ್ಕೂ ಒಳಗಾಗಿರುವದಿಲ್ಲ. ಒಬ್ಬ ಮುದುಕಿಯು ಅವರನ್ನು ಸಂರಕ್ಷಿಸುತ್ತಿರುವಳು. ಜಹಗೀರದಾರ ಗೋವಿಂದರಾಯನ ಚಿಕ್ಕ ಮಗನಾದ ಕೇಶವನೆಂಬವನು ಮಹಾನೀಚನಿರುತ್ತಾನೆ. ಅವನು ಜಾನಕಿಯನ್ನು ಅದೇಕೆ ಆಕೆಯ ಮನೆಯ ಎಲ್ಲ ಹೆಂಗಸರನ್ನು ಭ್ರಷ್ಟಗೊಳಿಸುವ ಸಾಹಸದಲ್ಲಿರುತ್ತಾನೆ. ಮಹಾರಾಜ, ನೀವು ಆ ಅನಾಥ ಹೆಂಗಸರನ್ನು ಈ ಸಂಕಟದಿಂದ ಮುಕ್ತರನ್ನಾಗ ಮಾಡಿರಿ; ಇದಕ್ಕಿಂತಲೂ ಪವಿತ್ರ ಮಹತ್ಕಾರ್ಯವು ಇನ್ನಾವದಿರುವದು?

ಬಾಬಾಸಾಹೇಬನು ವಿಚಾರದಲ್ಲಿ ಬಿದ್ದನು. ತಾನು ವಿಚಾರಿಸುವ ಬಾಲಿಕೆಯು ತನ್ನ ಹೆಸರನ್ನು ಬೇರೆ ಹೇಳಿದ್ದು, ಈ ಅಂಗಡಿ

ಕಾರನು ಜಾನಕಿಯೆಂದು ಹೇಳುವನಲ್ಲ? ನಾನು ಕೇಳುವ ಬಾಲಿಕೆ ಯಾರೋ? ಇವನು ಹೇಳುವ ಬಾಲಿಕೆಯಾರೋ? ಎಂದು ಯೋಚಿಸ ತೊಡಗಿದನು. ಅಷ್ಟರಲ್ಲಿ ಎದುರಿಗಿನ ದೊಡ್ಡ ಮನೆಯೊಳಗಿಂದ ಒಬ್ಬ ಮುದುಕಿಯು ಒಬ್ಬ ಬಾಲಿಕೆಯೊಡನೆ ಹೊರಬಿದ್ದಳು ಆಗ ಅಂಗಡಿಯವನು--ಮಹಾರಾಜ, ನೀವು ಕೇಳುವ ಆ ಹುಡುಗೆಯು ಇವಳೇ ಅಲ್ಲವೇ? ಈಕೆಯ ಹೆಸರೇ ಜಾನಕಿ, ಎಂದನು.

ಬಾಲಿಕೆಯ ದೃಷ್ಟಿಯು, ಬಾಬಾಸಾಹೇಬನ ಮೇಲೆ ಬಿದ್ದ ಕೂಡಲೆ ಅವಳು ಅವನ ಗುರ್ತು ಹಿಡಿದಳು; ಮತ್ತು ತನ್ನ ಬಳಿಯಲ್ಲಿರುವ ಮುದುಕಿಗೆ ಬಾಬಾಸಾಹೇಬನನ್ನು ತೋರಿಸಿ, ಕೃತಜ್ಞತೆಯಿಂದ ನೋಡುತ್ತ ಮುಂದಕ್ಕೆ ಸಾಗಿದಳು. ಆಗ ಬಾಬಾಸಾಹೇಬನು ಅಂಗಡಿಯವನಿಗೆ ಸಂಶಯ ಬರಬಾರದೆಂದು—ಛೇ; ನಾನು ಕೇಳುವ ಹುಡುಗೆಯು ಇವಳಲ್ಲ, ಎಂದು ನುಡಿದು ಅಲ್ಲಿಂದ ಹೊರಬಿದ್ದನು.

ಮುಂದೆ ಸ್ವಲ್ಪ ಹೊತ್ತಿನಲ್ಲಿ ಆ ಬಾಲಿಕೆಯು ಒಂದು ಮುರುಕ ಮನೆಯನ್ನು ಹೊಕ್ಕಳು. ಆಕೆಯನ್ನು ಬೆಂಬಾಲಿಸಿ ಹೋದ ಬಾಬಾಸಾಹೇಬನು ಮನಸಿನಲ್ಲಿ ಏನೇನೋ ವಿಚಾರಿಸುತ್ತ ಆ ಮುರುಕಮನೆಯ ಬಳಿಯಲ್ಲಿರುವ ಎಲಿ ಅಡಿಕೆಯ ಅಂಗಡಿಗೆ ಹೋಗಿ ಅಲ್ಲಿ ತಾಂಬೂಲವನ್ನು ಸವಿಯುತ್ತ ಕುಳಿತನು; ಮೂರುಸಂಜೆಯು ಹೊತ್ತಾಯಿತು. ಊರತುಂಬ ದೀಪಗಳು ಹತ್ತಿದವು. ಆದರೂ ಬಾಬಾಸಾಹೇಬನ ತಾಂಬೂಲ ಭಕ್ಷಣವು ಮುಗಿಯಲಿಲ್ಲ. ಅವನು ಆ ಮುರುಕ ಮನೆಯನ್ನು ಎವೆಯಿಕ್ಕದೆ ನೋಡುತ್ತಿದ್ದನು. ಸ್ವಲ್ಪ ಮಬ್ಬುಗತ್ತಲಾದ ಬಳಿಕ ಆ ಮನೆಯೊಳಗಿಂದ ಆ ಮುದುಕಿಯು ಹೊರಬಿದ್ದಳು. ಅದನ್ನು ಕಂಡು ಬಾಬಾಸಾಹೇಬನು ಅಲ್ಲಿಂದೆದ್ದನು. ಮುದುಕಿಯು ತೀವ್ರವಾಗಿ ಹೊಳೆಗೆ ಹೋಗಿ ಕೂಡತುಂಬಿದಳು;

ಇನ್ನು ಅವಳು ಹೊರಡತಕ್ಕವಳು, ಅಷ್ಟರಲ್ಲಿ ಬಾಬಾಸಾಹೇಬನು ಅವಳ ಹಿಂದಿನಿಂದ ಹೋಗಿ--"ಬಾಯೀ, ನೀನು ಕಾದಂಬಿನಿಗೆ ಏನಾಗಬೇಕು?" ಎಂದು ವಿಚಾರಿಸಿದನು.

ಮುದುಕಿಯು ಬೆಚ್ಚಿಬಿದ್ದಳು. ಅವಳು ವಿಸ್ಮಯದಿಂದ ತಿರುಗಿ ನೋಡುತ್ತಾಳೆ, ಕಾದಂಬಿನಿಯು ತೋರಿಸಿದ ತರುಣನು! ಆಗ ಅವಳು ಕೃತಜ್ಞತೆಯಿಂದ ಆತನನ್ನು ಕುರಿತು -ಬಾಬಾಸಾಹೇಬ, ಈ ದಿವಸ ನೀವು ನಮ್ಮ ಹುಡುಗೆಯ ಮೇಲೆ ಮಹದುಪಕಾರ ಮಾಡಿದಿರಿ! ಈ ದಿನ ಆಕೆಯ ಕಲಶವು ಹೋಗಿದ್ದರೆ ಅವಳ ಗತಿಯು ಏನಾಗುತ್ತಿತ್ತೋ, ದೇವರೇ ಬಲ್ಲ! ಎಂದಳು

ಬಾಬಾಸಾಹೇಬ—ಏನಾಗುತ್ತಿತ್ತು?

ಮುದುಕಿ—ಆಕೆಯು ವೈಮುರಿ ಬಡಿಸಿಕೊಳ್ಳುತ್ತಿದ್ದಳು ಇಲ್ಲವೆ ಚಾಕರಿಯಿಂದ ಬಿಡುಗಡೆ ಹೊಂದುತ್ತಿದ್ದಳು. ಈ ದಿವಸ ನಮ್ಮ ನಾಲ್ಕು ಜನರ ಅನ್ನವನ್ನು ಸಂರಕ್ಷಿಸಿ ಕೊಟ್ಟಹಾಗಾಯಿತು

ಬಾಬಾಸಾಹೇಬ—ನೀವು ಆ ಸುಕುಮಾರಿಯನ್ನು ಆ ಕಟುಕನ ಮನೆಯಲ್ಲಿ ದುಡಿಯ ಹಚ್ಚಬಹುದೇ?

ಮುದುಕಿ (ಅಳುತ್ತ)--ಅಪ್ಪಾ, ಏನು ಮಾಡಬೇಕು! ಕಾಲಚಕ್ರವು ತಿರುಗಿತೆಂದರೆ ಬೇಕಾದದ್ದನ್ನು ಮಾಡಬೇಕಾಗುತ್ತದೆ. ಹಾಯ್! ನಮ್ಮ ದುರ್ದೈವವು. ಯಾವ ಹುಡುಗೆಯು ಗರ್ಭಶ್ರೀಮಂತಿಕೆಯನ್ನು ಅನುಭವಿಸಿರುವಳೊ. ಅವಳು ಈಗ ಹೊಟ್ಟೆಯ ಸಲುವಾಗಿ ಪರದಾಸ್ಯವನ್ನು ಮಾಡಬೇಕಾಗಿದೆ. ದೈವದ ಮುಂದೆ ಯಾರು ಓಡುವರು?

ಬಾಬಾಸಾಹೇಬ--ಪ್ರಸಂಗ ಬಂದ ಮೇಲೆ ಯತ್ನವಿಲ್ಲ. ಆದರೆ ಬೇರೆ ಸ್ಥಳವು ನಿಮಗೆ ಸಿಕ್ಕಲಿಲ್ಲವೇ?

ಮುದುಕಿ—ಸಿಕ್ಕಿದ್ದರೆ ನಾನೆಲ್ಲಿ ಅವಳನ್ನು ಅಲ್ಲಿ ಇರಗೊಡು

ತ್ತಿದ್ದೆನು?

ಬಾಬಾಸಾಹೇಬ—ಎರಡನೆಯ ಕಡೆಗೆ ಉತ್ತಮ ಸ್ಥಳವು ಸಿಕ್ಕರೆ ನೀವು ಅಲ್ಲಿ ಆ ಹುಡುಗೆಯನ್ನು ಇಡುವಿರಾ?

ಮುದುಕಿ—ಆನಂದದಿಂದ ಇಡುವೆವು. ನಮ್ಮ ಹುಡುಗೆಯು ಸೌಖ್ಯದಿಂದ ಇರುವದು ನನಗೆ ಬೇಡವೆ?

ಬಾಬಾಸಾಹೇಬ—ಹಾಗಾದರೆ ನೀವು ನನ್ನನ್ನು ಚಲೋ ಮನುಷ್ಯನೆಂದು ತಿಳಿಯುತ್ತಿದ್ದರೆ ನಾಳೆಗೆ ನಿಮ್ಮ ಹುಡುಗೆಯನ್ನು ನನ್ನಲ್ಲಿಗೆ ಕಳಿಸಿಕೊಡಿರಿ

ಮುದುಕಿ – ನಿಮ್ಮ ಮನೆಯೆಲ್ಲಿರುವದು?

ಬಾಬಾಸಾಹೇಬನು ಆ ಮುದುಕಿಯನ್ನು ಕರಕೊಂಡು ನಡೆದನು. ಕೆಲಹೊತ್ತಿನ ಮೇಲೆ ಪ್ರಾಸಾದತುಲ್ಯವಾದ ಒಂದು ಮನೆಯು ಹತ್ತಿತು. ಜವಾನರು ಕಂದೀಲದ ಬೆಳಕಿನಲ್ಲಿ ಬಾಬಾಸಾಹೇಬನನ್ನು ಒಳಗೆ ಕರಕೊಂಡು ನಡೆದರು. ಒಳಗೆ ಹೋಗುವಾಗ ಆತನು ಮುದುಕಿಗೆ—ನೋಡಿದಿರಾ, ನಮ್ಮ ಮನೆಯನ್ನು! ಇಲ್ಲಿಗೇ ಬಾಲಿಕೆಯನ್ನು ಕರೆದುಕೊಂಡು ಬರುತ್ತೇನೆ; ಎಂದು ನುಡಿದನು ಮುದುಕಿಯು ಒಪ್ಪಿಕೊಂಡು ಅಲ್ಲಿ ನಿಂತಳು

---

[ ೬ ]

ದುರ್ದೈವೀ ಮನುಷ್ಯನು ಒಮ್ಮೆ ಸಂಕಟಕ್ಕೆ ಗುರಿಯಾದನೆಂದರೆ ಅದರಿಂದ ಅವನು ಬೇಗನೆ ಪಾರಾಗಲಾರನು. ಸಮುದ್ರದಲ್ಲಿ ಒಂದರ ಹಿಂದೊಂದರಂತೆ ತೆರೆಗಳು ಉತ್ಪನ್ನವಾಗಿ ಅವು ದಂಡೆಗೆ ಅಪ್ಪಳಿಸುವಂತೆ ದುಃಖರೂಪ ಸಂಸಾರಸಮುದ್ರದಲ್ಲಿ ದುಃಖರೂಪ ತೆರೆಗಳು ಹುಟ್ಟಿ ದುಃಖರೂಪವಾದ ದಂಡೆಗೆ ಅಪ್ಪಳಿ

ಸುತ್ತವೆ. ಒಂದು ಸಂಕಟವನ್ನು ನೀಗಿದೆನೆಂದು ಸಂತೋಷಪಡುವ ಷ್ಟರಲ್ಲಿ ಮತ್ತೊಂದು ಸಂಕಟವು ಎದುರಿಗೆ ಬಂದು ನಿಲ್ಲುವದನ್ನು ಬಹುಜನ ಸಂಸಾರಿಕರು ಅನುಭವದಿಂದ ಬಲ್ಲರು! ಹಾಯ್! ಹಾಯ್! ಭವಸಾಗರದಿಂದ ದಾಟುವದು ಬಹು ದುಸ್ತರ.

ಹತಭಾಗ್ಯನಾದ ವಾಸುದೇವರಾಯನ ಸಂಸಾರವು ತಂದೆಯು ಪಶ್ಚಾತ್ ಒಂದೆರಡು ತಿಂಗಳು ಹ್ಯಾಗಾದರೂ ಸಾಗಿತು. ಮೂರನೇ ತಿಂಗಳವು ಪ್ರಾಪ್ತವಾಯಿತು. ಅವನ ಮೇಲಿನ ಸ್ತ್ರೀದಾರಿದ್ರ್ಯದೇವಿಯು ಕೃಪೆಯಂತೂ ಹೆಚ್ಚುತ್ತ ಹೋಯಿತು. ಮನೆಯಲ್ಲಿ ಒಂದು ಒಡಕು ಕಾಳುಸಹ ಇಲ್ಲದಾಯಿತು. ಕೊಳ್ಳಲಿಕ್ಕೆ ದುಡ್ಡಿಲ್ಲ; ಹಾಯ್! ಎಂಥ ಪ್ರಸಂಗವಿದು? ಆ ದಿವಸ ಎಲ್ಲರೂ ಜಲಪ್ರಾಶನದ ಮೇಲೆ ಕಾಲಕಳೆದರು: ವಾಸುದೇವರಾಯನು ಬಹು ಚಿಂತೆಗೊಳಗಾದನು. ಬೆಳತನಕ ಆತನು ಈ ಚಿಂತೆಯಿಂದಲೇ ಬೆಂದು ಬೆಂಡಾದನು. ಬೆಳಿಗ್ಗೆ ಆತನು ಹಾಸಿಗೆಯಿಂದ ಏಳುವಷ್ಟರಲ್ಲಿ ಒಂದು ಪತ್ರವು ಅವನ ಕೈಗೆ ಸಿಕ್ಕಿತು. ಅದನ್ನು ಆವನು ಓದಿನೋಡಿ ಒಮ್ಮೆಲೆ ಸಣ್ಣ ಹುಡುಗನಂತೆ ಬಿಕಿಬಿಕ್ಕಿ ಅಳಲಾರಂಭಿಸಿದನು. ಹೆಂಗಸರೆಲ್ಲರೂ ಗಾಬರಿಯಾಗಿ ಉಪ್ಪರಿಗೆಯ ಮೇಲಿಂದ ಇಳಿದು ಬಂದರು; ವಾಸುದೇವನು ಬಾಯಬಿಚ್ಚಿ ಮಾತಾಡಲಾರದೆ ಆ ಪತ್ರವನ್ನೇ ಅವರ ಮುಂದೆ ಚೆಲ್ಲಿದನು. ಅದರ ವಾಚನದಿಂದ ಹೆಂಗಸರೂ ಹಾಯ್! ಹಾಯ್! ಎಂದು ಪ್ರಲಾಪ ಮಾಡಲಾರಂಭಿಸಿದರು. ಆ ಪತ್ರದ ಸಂಗತಿಯು ಕೆಳಗೆ ಬರೆದಂತೆ ಇತ್ತು: -

"ಪರಮಪೂಜ್ಯ ಪ್ರಿಯಬಂಧು,

ದೈವದುರ್ವಿಪಾಕದಿಂದ ಈಗ ನಮಗೆ ದುರ್ದೆಶೆಯು ಪ್ರಾಪ್ತವಾಗಿರುತ್ತದಷ್ಟೇ; ಈ ಅರಿಷ್ಟವನ್ನು ಸಮೂಲ ನಷ್ಟಗೊಳಿಸುವದಕ್ಕಾಗಿ ನಾವು ಜನ್ಮಭೂಮಿಯನ್ನು ತ್ಯಜಿಸಲಿಚ್ಛಿಸಿರುತ್ತೇವೆ

ದುರ್ದೈವದ ಪರಿಮಾರ್ಜನವಾಗುವ ವರೆಗೆ ನಾವು ಮನೆಗೆ ತಿರುಗಿ ಬರಲಾರೆವು.

ಬೆಂಗಳೂರನಿವಾಸಿಯಾದ ಪ್ರಾತಃಸ್ಮರಣೀಯ ಒಬ್ಬ ಶ್ರೀಮಾನ್ ಗೃಹಸ್ಥನ ಸಹಾಯದಿಂದ ನಾವು ಜಪಾನಕ್ಕೆ ಹೋಗಿ 'ಖನಿಜಶಾಸ್ತ್ರ'ವನ್ನು ಅಭ್ಯಾಸಿಸುವ ನಿಶ್ಚಯವನ್ನು ಮಾಡಿರುತ್ತೇವೆ. ನೌಕರಿಯಿಂದ ಅರ್ಥಾತ್ ಪರದಾಸ್ಯದಿಂದ ಅಂದರೆ ಗುಲಾಮಗಿರಿಯಿಂದ ಎಂದೂ ಕುಟುಂಬ ಪೋಷಣ ಮಾಡಲಿಕ್ಕಿಲ್ಲೆಂಬ ಪ್ರತಿಜ್ಞೆಯನ್ನು ಮಾಡಿರುತ್ತೇವೆ ಈ ದೃಷ್ಟಿಯಿಂದ ನಾವು ನಮ್ಮ ಅಭ್ಯಾಸ ಕ್ರಮವನ್ನು ಸಾಗಿಸತಕ್ಕವರಿರುವೆವು. ನಮ್ಮ ಈ ವಿಚಾರವು ಸದ್ಧೇತು ಪ್ರೇರಿತವಾಗಿರುವದರಿಂದ ನಿಮಗಾದರೂ ದುಃಖವಾಗಲಿಕ್ಕಿಲ್ಲೆಂಬ ವಿಶ್ವಾಸವು ನಮಗಿರುತ್ತದೆ ನೀವು ನಮ್ಮ ಚಿಂತೆಯನ್ನು ಬಿಟ್ಟು ನಮ್ಮ ಬಂಧು ಭಗಿನಿಯರಿಗೆ ಧೈರ್ಯಕೊಡುತ್ತಿರಬೇಕು. ಶಿವೂ ಅಣ್ಣನಿಗೆ ಆತನು ಕಾರಾಗೃಹದಿಂದ ಬಿಡುಗಡೆಯಾಗುವ ವರೆಗೆ ಈ ಸಂಗತಿಯನ್ನು ತಿಳಿಸಬಾರದು.

ಇತಿ ವಿನಂತಿ.

ನಿಮ್ಮ

ಮಹಾದೇವ ಮತ್ತು ವಿಶ್ವನಾಥ"

ವಾಚಕರೇ, ಪಾಪ! ವಿಪನ್ನಾವಸ್ಥೆಯಲ್ಲಿದ್ದ ವಾಸುದೇವರಾಯನ ಹೃದಯವು ಜರ್ಜರವಾಗಲಿಕ್ಕೆ ಈ ಪತ್ರದ ಸಂಗತಿಯು ಸಾಕಾಯಿತು; ಆದ್ದರಿಂದ ಆತನು ಆಕ್ರೋಶ ಮಾಡದೆ ಏನು ಮಾಡಿಯಾನು? ಇರಲಿ;

ಮುಂದೆ ಕೆಲ ಹೊತ್ತಿನ ಮೇಲೆ ಶೋಕದ ಭರವು ತಗ್ಗಿತು. ವಾಸುದೇವರಾಯನು ಮನೆಯಿಂದ ಹೊರಬಿದ್ದನು. ಆತನು ಈಗ ಬಂದಾನು, ಇನ್ನೊಂದು ತಾಸಿಗೆ ಬಂದಾನು ಎಂದು ದಾರೀ ನೋ-

ಡುತ್ತ ಮನೆಯೊಳಗಿನ ಹೆಂಗಸರು ಸಂಜೆಯವರೆಗೆ ಬಾಯೊಳಗೆ ನೀರು ಸಹ ಹಾಕಲಿಲ್ಲ; ಆದರೆ ವಾಸುದೇವನು ಹೋದವನು ಹೋಗಿಯೇ ಬಿಟ್ಟನು. ಮಾಲತಿ-ಸುಲೋಚನೆಯರು ಗೋಳಿಟ್ಟರು. ಈ ಸ್ಥಿತಿಯಲ್ಲಿ ಒಂದು ದಿನವಾಯಿತು; ಎರಡು ದಿನಗಳಾದವು. ಮೂರು ದಿನಗಳು ಕಳೆದವು ಆದರೂ ವಾಸುದೇವನು ತಿರುಗಲಿಲ್ಲ.

ಶಂಕರರಾಯನ ಮನೆತನದ ಕಥೆ ಮುಗಿಯಿತೆಂದು ಜನರು ಆಡಿಕೊಳ್ಳಹತ್ತಿದರು. ಹಾಯ್! ಎಂಥ ಭಯಂಕರ ಪ್ರಸಂಗವಿದು? ಶಿವರಾಯನು ಸೆರೆಮನೆಯಲ್ಲಿ ಬಿದ್ದನು ಮಹಾದೇವ-ವಿಶ್ವನಾಥರು ಪೌರುಷಸಂಪಾದನೆಗೆ ಹೊರಟುಹೋದರು ವಾಸುದೇವನು ಸಾಂಸಾರಿಕ ಯಾತನೆಯನ್ನು ಅನುಭವಿಸಲಾರದೆ ದೇಶತ್ಯಾಗಮಾಡಿದನು. ಹಾಯ್! ಆ ಅನಾಥ ಹೆಣ್ಣುಮಕ್ಕಳ ಗೋಳನ್ನು ಕೇಳಲಾಸಲ್ಲ. ಮನೆಯಲ್ಲಿ ಧಾನ್ಯವಿಲ್ಲ; ದ್ರವ್ಯವಿಲ್ಲ, ಎರಡು ಮೂರು ದಿನಗಳವರೆಗೆ ಅವರು ಏಕಾದಶಿಯ ವ್ರತವನ್ನೇ ಆಚರಿಸಬೇಕಾಯಿತು. ಆದರೆ ಅನ್ನಮಯಪ್ರಾಣವು; ಎಷ್ಟು ದಿವಸಗಳ ವರೆಗೆ ಉಪವಾಸವಿರುವದು? ಎಂಥ ಕೆಟ್ಟ ಪ್ರಸಂಗಗಳು ಬಂದರೂ. ಪ್ರಾಣಿಮಾತ್ರಗಳ ಹೊಟ್ಟೆಗೆ ಏನಾದರೂ ಆಹಾರ ಬಿದ್ದೇ ತೀರಬೇಕಾಗುವದು. ಕಡೆಗೆ ಪಾರ್ವತಿಯು ಸಾಹಸಬಟ್ಟು ಕೆಲವು ರೂಪಾಯಿಗಳನ್ನು ತಂದು ಕೊಟ್ಟಳು. ಮಾಲತಿಯೂ ತನ್ನ ಮೂಗುತಿಯನ್ನು ಮಾರಿದಳು. ಆದರೆ ಆ ಹಣವು ಐದಾರು ಜನರ ಹೊಟ್ಟೆಗೆ ಎಷ್ಟು ದಿವಸ ಸಾಲುವದು? ಸ್ವಲ್ಪ ದಿವಸಗಳಲ್ಲಿ ಅವರಿಗೆ ಮತ್ತೆ ಮೊದಲಿನ ಸ್ಥಿತಿಯು ಪ್ರಾಪ್ತವಾಯಿತು.

ಪ್ರಸ್ತುತಕಾಲವು ದಯಾಶೂನ್ಯವೆಂದು ತಿಳಿಯಲ್ಪಡುತ್ತಿದ್ದರೂ ಅನಾಥರಾದ ಹೆಂಗಸರನ್ನು ಕಂಡು ಮರುಗುವ ಹಾಗು ಅವರಿಗೆ ಸಹಾನುಭೂತಿಯನ್ನು ತೋರಿಸುವ ಭೂತದಯಾಪರರಾದ

ಮಹಾತ್ಮರು ಬಹು ಜನರಿರುವರು. ಇವರ ಭೂತದಯೆಯಿಂದ ಅನಾಥ ಹೆಂಗಸರು ಸನಾಥರಾಗುತ್ತಿರುವರು!! ವಾಸುದೇವರಾಯನ ವಂಶದಲ್ಲಿ 'ಬಟುಕ'ನೆಂಬ ಮಹಾತ್ಮನಿದ್ದನು. ಇವನ ಕೀರ್ತಿಪ್ರಭಾವವು ಮೂರು ಲೋಕಗಳಲ್ಲಿಯೂ ಪಸರಿಸಿತ್ತು ಈತನು ವಾಸುದೇವರಾಯನಿಗೆ ಚಿಕ್ಕಪ್ಪನಾಗಬೇಕು; ಅಂದರೆ ಶಂಕರರಾಯನಿಗೆ ತಮ್ಮನಾಗಬೇಕ . ಆದರೆ ಕೆಲವು ಕಾರಣಾಂತರಗಳಿಂದ ಆ ಅಣ್ಣ ತಮ್ಮಂದಿರಲ್ಲಿ ವೈಮನಸ್ಯವು ಬೆಳೆದದ್ದರಿಂದ ಅವರು ಇಹಜನ್ಮದಲ್ಲಿ ಒಬ್ಬರ ಮೋರೆಯನ್ನು ಮತ್ತೊಬ್ಬರು ನೋಡುವಹಾಗಿದ್ದಿಲ್ಲ. ಅಂದಬಳಿಕ ಶಂಕರರಾಯನಿಂದ ಬಟುಕನು ಬೇರೆಯಿದ್ದನೆಂದು ಯಾಕೆ ಹೇಳಬೇಕು? ಆತನು ಬೇರೆಯಾದಂದಿನಿಂದ ಈವೊತ್ತಿನ ವರೆಗೆ ವಾಸುದೇವರಾಯನ ಮನೆಯ ಹೊಸ್ತಿಲವನ್ನು ಮೆಟ್ಟಿದ್ದಿಲ್ಲ. ಆದರೆ ಪರರ ಸಂಕಟ ಕಾಲದಲ್ಲಿ ಇಂಥ ಮಹಾತ್ಮರು ದಯೆಯನ್ನು ಪ್ರಕಟಿಸುತ್ತಾರೆ. ಕಡೆಗೆ ಒಂದು ದಿನ ಬಟುಕನು ಮಧ್ಯಾಹ್ನ ೨ ಬಡಿಯುವ ಸಮಯದಲ್ಲಿ ವಾಸುದೇವರಾಯನ ಮನೆಯನ್ನು ಹೊಕ್ಕನು. ಮಾಲತಿ, ಸೌಮಿತ್ರಿ, ಮನೋರಮೆ ಮೊದಲಾದ ಹೆಂಗಸರು ನೆರೆ ಮನೆಗೆ ಹೋಗಿದ್ದರು ಪಾರ್ವತಿಯು ಒತ್ತಟ್ಟಿಗೆ ಹಂಜಿಯನ್ನು ನೂಲುತ್ತ ಕುಳಿತಿದ್ದಳು. ಸುಲೋಚನೆ ಹಾಗು ಕಾದಂಬಿನಿಯರಿಬ್ಬರೇ ನಡುಮನೆಯಲ್ಲಿ ಕುಳಿತುಕೊಂಡಿದ್ದರು

ಅಕಸ್ಮಾತ್ತಾಗಿ ಬಂದ ಬಟುಕನನ್ನು ನೋಡಿ ಸುಲೋಚನೆಯು ಬೆದರಿದಳು. ಆಕೆಯು ಮನಸ್ಸಿನಲ್ಲಿ—"ಇಷ್ಟು ಸಂಕಟಗಳು ಒದಗಿದರೂ ಬಾರದೆ ಇದ್ದ ಈತನು ಈ ದಿನ ಯಾಕೆ ಬಂದನು?" ಎಂದು ಅಂದುಕೊಂಡಳು. ಆದರೆ ಮನೆಮುಟ್ಟಿ ಬಂದ ಶತ್ರುವನ್ನಾದರೂ ಆದರಿಸಬೇಕೆಂದು ಹಿರಿಯರು ಹೇಳಿರುವದರಿಂದ ಆ ನೀತಿಗನುಸರಿಸಿ ಆವಳು ಚಟ್ಟನೆದ್ದು ಒಂದು ಕಂಬಳಿಯನ್ನು ಹಾಸಿ, ಬಟುಕನನ್ನು

ದ್ದೇಶಿಸಿ —ಓಹೋ! ಕಾಕಾನವರೇನು? ಈ ದಿವಸ ಹಾದಿಯು ತಪ್ಪಿ ಇತ್ತ ಎಲ್ಲಿಗೆ ಬಂದಿರಿ? ಎಂದು ನುಡಿದಳು

ಬಟುಕ (ಕೂಡ್ರುತ್ತ)—ತಂಗೀ, ಸುಲೋಚನೆ, ಶಂಕರಣ್ಣನು ನನ್ನನ್ನು ನಿಷ್ಕಾರಣವಾಗಿ ದ್ವೇಷಿಸುತ್ತಿದ್ದನು. ಆತನ ಭೀತಿಯಿಂದ ನಾನು ಇದುವರೆಗೂ ಮನೆಯ ಸಮೀಪಕ್ಕೆಸಹ ಸುಳಿಯಲಿಲ್ಲ. ನಾನು ಪ್ರಯಾಗದಲ್ಲಿದ್ದಾಗ ಅಣ್ಣಂದಿರ ನಿಧನವಾರ್ತೆಯು ತಿಳಿಯಿತು ಆದ್ದರಿಂದ ಇಲ್ಲಿಗೆ ಬಂದೆನು. ಆದರೆ ಇಲ್ಲಿಗೆ ಬಂದಬಳಿಕ ಶಿವ್ರಾನಿಗೆ ಶಿಕ್ಷೆಯಾದದ್ದೂ, ಮಹಾದೇವ-ವಿಶ್ವನಾಥರು ಜಪಾನಕ್ಕೆ ಹೋದದ್ದೂ, ವಾಸುದೇವನು ಹೇಳದೆ ಕೇಳದೆ ಹೊರಟು ಹೋದದ್ದೂ ಗೊತ್ತಾಯಿತು ತಂಗೀ, ಇಂಥ ದುಸ್ಥಿತಿಯನ್ನು ಪ್ರತ್ಯಕ್ಷನೋಡಿಯೂ ನಿಮ್ಮ ಮಕ್ಕಳುಮರಿಗಳಿಗೆ ಸಹಾಯಮಾಡುವ ಬುದ್ಧಿಯು ನನ್ನಲ್ಲಿ ಹುಟ್ಟಬಾರದೇನು?

ಬಟುಕನ ಮಾತು ಕೇಳಿ ಸುಲೋಚನೆಯ ದುಃಖವು ಒತ್ತರಿಸಿತು. ಅವಳು ಒಂದು ತುಟಿ ಎರಡು ಮಾಡದೆ ಸುಮ್ಮನೆ ದುಃಖಿಸ ತೊಡಗಿದಳು ಆಗ ಆತನು ಅತ್ಯಂತ ವಾತ್ಸಲ್ಯಭಾವವನ್ನು ನಟಿಸಿ, ಅವಳನ್ನು ಬೇರೆಕಡೆಗೆ ಕರೆದೊಯ್ದು ನಾಲ್ಕು ಸಮಾಧಾನದ ಮಾತುಗಳನ್ನು ಹೇಳಿ, ಆಕೆಯ ಕೈಯಲ್ಲಿ ೧೦ ರೂಪಾಯಿಗಳನ್ನು ಹಾಕಿ—ತಂಗೀ, ಇವನ್ನು ನೀನು ತಕ್ಕೊ; ಏನೂ ಸಂಕೋಚಪಡಬೇಡ. ಹ! ಹೀಗೇಕೆ ಮಾಡುವಿ? ನಾನು ಪರಕೀಯನೇನು? ನಡೆ ಒಳಗೆ; ಇವನ್ನು ತೆಗೆದು ಇಟ್ಟುಕೋ.

ಮಹಾತ್ಮ ಬಟುಕನು ನಿಸ್ವಾರ್ಥಬುದ್ಧಿಯಿಂದ ದಾನ ಕೊಡಲಿಕ್ಕೆ ಬಂದ ದಿವಸ ಸಹ ಆ ಮನೆಯವರಿಗೆಲ್ಲರಿಗೂ ಏಕಾದಶಿಯು ಪ್ರಾಪ್ತವಾಗಿತ್ತು. ಪಾಪ! ಆ ಅನಾಥಸ್ತ್ರೀಯರು ಬಹುತರವಾಗಿ ಹೀಗಾಗಿಯೇ ನಿರಾಹಾರಗಳಿಂದ ಕಾಲಹರಣ ಮಾಡುತ್ತಿದ್ದರು. ಸುಲೋ

ಚನೆಯು ಇಂಥ ಭಯಂಕರವಾದ ಪ್ರಸಂಗದಲ್ಲಿ ಪೇಚಾಡುತ್ತಿದ್ದದರಿಂದ ಆಕೆಯು ಬಟುಕನು ಕೊಟ್ಟ ದಾನವನ್ನು ಗ್ರಹಣಮಾಡಿದಳೆಂದು ವಾಚಕರು ಆಕೆಗೆ ದೋಷಕೊಡುವ ಭರಿಗೆ ಬೀಳಬಾರದು. ಆಕೆಯು ದಾನ ತಕ್ಕೊಂಡಳು ಮಾತ್ರ; ಆದರೆ ಆ ರೂಪಾಯಿಗಳಿಗೆ ಅಶ್ರುಗಳಿಂದ ಸ್ನಾನಮಾಡಿಸಿ ತಕ್ಕೊಂಡಳು. ಬಟುಕನು ತನ್ನ ಒಲ್ಲಿಯ ಸೆರಗಿನಿಂದ ಆಕೆಯ ಕಣ್ಣುಗಳನ್ನು ಒರಿಸಿದನು; ಮತ್ತು ಆಕೆಗೆ ನಾಲ್ಕು ಸಮಾಧಾನದ ಮಾತುಗಳನ್ನು ಹೇಳಿ ತನ್ನ ಮನೆಯ ಕಡೆಗೆ ಹೊರಟುಹೋದನು.

ಈ ಮಾತಿಗೆ ಒಂದು ತಿಂಗಳು ಕ್ರಮಿಸಿತು. ಆದರೂ ವಾಸುದೇವನ ಸುದ್ದಿಯು ತಿಳಿಯಲಿಲ್ಲ. ಸುದ್ದಿಯನ್ನು ತರುವವರಾದರೂ ಯಾರು? ಮನೆಯಲ್ಲಿ ಗಂಡಸರೆಂಬವರು ಇದ್ದರಷ್ಟೇ ಮುಂದಕ್ಕೆ ಹೋಗಿ ಪ್ರಯತ್ನ ಮಾಡುವದು? ಮಾಲತಿ ಸುಲೋಚನೆಯರಿಂದ ಅಳುವದರ ಹೊರತು ಹೆಚ್ಚಿನ ಕೆಲಸವಾಗಲಾರದೆಂಬದು ಸಹಜವು. ಒಂದುದಿನ ಸುಲೋಚನೆಯು ಅತಿ ದುಃಖದಿಂದ ಮಾಲತಿಯ ಕೊರಳಿಗೆ ಜೋತುಬಿದ್ದು—ಅತ್ತಿಗೀ, ಎಲ್ಲರೂ ಒಮ್ಮೆಲೆ ನಮ್ಮನ್ನು ಹೀಗೇಕೆ ತ್ಯಾಗಮಾಡಿರಬಹುದು?

ಮಾಲತಿ—ಎಲ್ಲರೂ ತ್ಯಾಗಮಾಡಿದರೂ ಒಂದು ಆಧಾರವು ಮಾತ್ರ ನಮಗಿರುವದು.

ಸುಲೋಚನೆ—ಅದು ಯಾವ ಆಧಾರವವ್ವಾ? ನನಗಂತೂ ತಿಳಿಯಲೊಲ್ಲದು

ಮಾಲತಿ—ನಿಗಮಾಗಮಗಳಿಗೆ ಅಗಮ್ಯನಾದ ಪರಮಾತ್ಮನೇ ನಮಗೆ ಆಧಾರಭೂತನು. ಅವನಿಗಿಂತಲೂ ಹೆಚ್ಚಿನ ಆಧಾರವು ಬೇರೆ ಯಾವುದಿರುವದು?

ಈ ಸಂಸಾರದ ಗತಿಯು ವಿಚಿತ್ರವಿರುತ್ತದೆ. ದರ್ಮಲಂಡ

ರಿಗೂ ದೇವಲಂಡರಿಗೂ ಸೌಖ್ಯ ದೊರೆಯುತ್ತದೆ. ಇದಕ್ಕೆ ವಿರುದ್ಧ ವಾಗಿ ಧರ್ಮದ ಮೇಲೆ ಮತ್ತು ಪರಮಾತ್ಮನ ಮೇಲೆ ವಿಶ್ವಾಸವುಳ್ಳ ವರು ಕಷ್ಟ ಭೋಗಿಸಬೇಕಾಗುತ್ತದೆ'' ಪ್ರಿಯ ವಾಚಕರೇ, ಇದರ ಮರ್ಮವು ಏನಿರಬಹುದು?

ಬಟುಕನು ಮೇಲಿಂದಮೇಲೆ ವಾಸುದೇವನ ಮನೆಗೆ ಹೋಗಿ, ಆ ಅನಾಥ ಹೆಂಗಸರಿಗೆ ದ್ರವ್ಯ ಸಹಾಯ ಮಾಡಲುಪಕ್ರಮಿಸಿದನು. ಆತನ ಸಲಿಗೆಯು ಅವರಿಗೆ ವಿಶೇಷವಾಯಿತು. ಆತನು ಮನೆಗೆ ಬಂದ ಕೂಡಲೆ ಮಾಲತಿಯೊಬ್ಬಳನ್ನು ಬಿಟ್ಟು ಉಳಿದವರು ಚಿಗಪ್ಪ-ಚಿಗಪ್ಪ ಎನ್ನುತ್ತ ಅವನ ಬಳಿಯಲ್ಲಿ ಕುಳಿತುಕೊಳ್ಳುತ್ತಿದ್ದರು. ಮಾಲತಿಯು ಮಾತ್ರ ಆತನ ಎದುರಿಗೆ ಸಹ ಹಾಯುತ್ತಿದ್ದಿಲ್ಲ; ಹಾಯುವಪ್ರಸಂಗ ಬಂದಲ್ಲಿ ಮೈತುಂಬ ಮುಸುಕು ಹಾಕಿಕೊಂಡು ಹೋಗುತ್ತಿದ್ದಳು. ಆಗ ಬಟುಕನು ಅಚ್ಚರಿಯಿಂದ—ತಂಗೀ, ಮಾಲತೀ, ನನಗೆ ಇಷ್ಟೇಕೆ ನಾಚುವಿಯವ್ವಾ! ನಾನು ನಿನ್ನ ಮಾವನಾದರೇನಾಯಿತು? ಇಷ್ಟು ನಾಚಬೇಕೇನು? ಎಂದು ಅನ್ನುತ್ತಿದ್ದನು. ಪಾಪ! ಸರಳ ಮನಸ್ಸಿನ ಆ ಹೆಂಗಸರು ಬಟುಕನು ತಮ್ಮ ಪರಮಾಪ್ತನೆಂದು ನಂಬಿದರು. ಅವನ ಮೇಲೆ ಅವರ ಪೂರ್ಣವಿಶ್ವಾಸವು ಕುಳಿತಿತು.

ಒಂದುದಿನ ಮಧ್ಯಾಹ್ನದ ಹೊತ್ತು; ಎರಡನೇ ಪ್ರಹರವು ಗತಿಸಿ ೩ನೇ ಪ್ರಹರಕ್ಕೆ ಪ್ರಾರಂಭವಾಗಿರುವದು. ಇಂಥ ಹೊತ್ತಿನಲ್ಲಿ ಬಟುಕಮಹಾಶಯನು ವಾಸುದೇವನ ಮನೆಗೆ ಬಂದನು. ಮಟ್ಟ ಮೊದಲು ಆತನಿಗೆ ಸುಲೋಚನೆಯು ಕಂಡಳು. ಉಳಿದವರಾಗೂ ಸಮೀಪದಲ್ಲಿ ಇದ್ದಂತೆ ತೋರಿಬರಲಿಲ್ಲ. ಈ ಸುಸಂಧಿಯನ್ನು ಸಾಧಿಸಿ, ಆ ಮಹಾತ್ಮನು ಸುಲೋಚನೆಯನ್ನು ಕುರಿತು ನುಡಿದನೇನಂದರೆ— ''ತಂಗೀ, ಸುಲೋಚನೆ, ನೀನು ಈಗಿಂದೀಗಲೇ ನನ್ನ ಸಂಗಡ ನಡೆ; ವಾಸುದೇವರಾಯನ ಸಂಬಂಧವಾಗಿ ಕೆಲವು ಮಹತ್ವದ ಸಂಗತಿಗ

ಳನ್ನು ನಿನಗೆ ತಿಳಿಸಬೇಕಾಗಿದೆ.''

ಸುಲೋಚನೆಯು ಗಾಬರಿಯಾದಳು, ಪಾಪ! ಆಕೆಗೆ ಬಟುಕನ ಕಪಟ ಹೃದಯವು ಹ್ಯಾಗೆ ಗೊತ್ತಾಗಬೇಕು? ಅವಳು ಭ್ರಾತೃವಾತ್ಸಲ್ಯದಿಂದ ಮನೆಯಲ್ಲಿ ಯಾರಿಗೂ ಹೇಳದೆ ಬಟುಕನ ಹಿಂದಿನಿಂದ ನಡೆದಳು. ಆಕೆಯು ಈವೊತ್ತಿನ ವರೆಗೆ ಬಟುಕನ ಹೊಸ್ತಿಲವನ್ನುಸಹ ಮೆಟ್ಟಿದ್ದಿಲ್ಲ. ಅವನ ಮನೆಗೆ ಹೋಗುವ ಪ್ರಸಂಗವು ಆಕೆಗೆ ಇದೇ ಮೊದಲು; ಯಾಕಂದರೆ ಶಂಕರರಾಯನು ಬಟುಕನನ್ನು ಹೊರಗೆ ಹಾಕಿದಂದಿನಿಂದ ಅವನು ತನ್ನ ಮಕ್ಕಳುಮರಿಗಳನ್ನು ಸಹ ಬಟುಕನ ಮನೆಗೆ ಹೋಗಗೊಡುತ್ತಿದ್ದಿಲ್ಲ, ಇರಲಿ. ಸುಲೋಚನೆಯು ಬಟುಕನ ಮನೆಯನ್ನು ಸೇರುವ ಮೊದಲು ನಮ್ಮ ವಾಚಕರಿಗೆ ಆ ಮಹಾತ್ಮನ ಪರಿಚಯವನ್ನು ಇನ್ನಿಷ್ಟು ಮಾಡಿಕೊಡುವದು ಅವಶ್ಯವಿರುತ್ತದೆ.

ಬಟುಕನ ವಯಸ್ಸು ನಾಲ್ವತ್ತರ ಮೇಲೆ, ಐವತ್ತರ ಒಳಗೆ ಇರಬಹುದು. ಆದರೆ ಯಾವ ಕಾರಣದಿಂದಲೋ ಆತನು ಅರವತ್ತು ವರುಷದ ಜರಠನಂತೆ ತೋರುತ್ತಿದ್ದನು. ಅವನ ಮೈಯಲ್ಲಿ ಕೇವಲ ಅಸ್ಥಿಪಂಜರವು ಮಾತ್ರ ಉಳಿದಿತ್ತು. ಅವನು ಬಣ್ಣದಲ್ಲಿ ಶುದ್ಧ ಕಾಡಿಗೆಯನ್ನು ಹೋಲುತ್ತಿದ್ದನು, ಅವನ ಮುಖವು ಸ್ವಲ್ಪ ದೀರ್ಘವಾಗಿತ್ತು. ಕಣ್ಣುಗಳು ಒಳನಟ್ಟಿದ್ದವು, ಕೂದಲುಗಳು ಪಿಂಗಟವಾಗಿದ್ದವು. ಮುಂದಿನ ಎರಡು ಹಲ್ಲುಗಳು ಉದುರಿದ್ದವು. ಅಧಿಕಪ್ರಸಂಗತನ, ಕುಕರ್ಮ, ವ್ಯಭಿಚಾರ, ವಿಶ್ವಾಸಘಾತುಕತನ ಇವೇ ಮೊದಲಾದ ಸದ್ಗುಣಗಳು ಅವನ ಸತ್ಕೀರ್ತಿಗೆ ಕಾರಣಗಳಾಗಿದ್ದವು. ಅವನ ದರ್ಪವು ಸ್ತ್ರೀಜನರಲ್ಲಿ ವಿಶೇಷವಾಗಿತ್ತು. ಕೇವಲ ಹರೆಯದ ಹೆಂಗಸರ ಮಾತು ಒತ್ತಟ್ಟಿಗಿರಲಿ; ವೃದ್ಧಾಪ್ಯದೆಸೆಯನ್ನು ಹೊಂದಿದಂಥ ನಷ್ಟಪುಷ್ಪವತಿಯರಾದ ಸ್ತ್ರೀಯರು ಸಹ ಹಾದಿಯು ಹಿಡಿದು ಹೋಗುವಾಗ ಈ ಮಹಾತ್ಮನ ಪ್ರಣಯಪೂರ್ಣ ದೃಷ್ಟಿ

ಯನ್ನು ತಪ್ಪಿಸಿಕೊಂಡು ಹೋಗಬೇಕಾದರೆ ಸಾಕಾಗಿ ಹೋಗುತ್ತಿತ್ತು!

ಪ್ರತಿನಿತ್ಯ ಬೆಳಿಗ್ಗೆ ಬಟುಕನು ಜಲಾಶಯದ ಮೇಲೆ ಕುಳಿತು ಕೊಂಡು ನೀರಿಗೆ ಬರಹೋಗುವ ಹೆಂಗಳೆಯರ ಅವಯುವಗಳ ಸೌಂದ ರ್ಯವನ್ನು ನೋಡುವದರಲ್ಲಿ ಧನ್ಯತೆಯನ್ನು ಪಡೆಯುತ್ತಿದ್ದನು. ಆಗ ಅವನು ಜಪಮಾಡುವ ಶಿಷ್ಟಬ್ರಾಹ್ಮಣನಂತೆ ನಟಿಸುತ್ತಿದ್ದನು. ಪ್ರಿಯ ವಾಚಕರೇ, ಆ ಸಚ್ಛೀಲ ಬ್ರಾಹ್ಮಣನ ಸದುದ್ಯೋಗದ ವರ್ಣನೆ ಯನ್ನು ಎಷ್ಟೆಂದು ಮಾಡಬೇಕು? ಧನೋತ್ಪಾದನದ ಆತನ ವ್ಯವ ಸಾಯವು ಆತನ ಆಚರಣೆಗೆ ಒಪ್ಪುವಂತೆ ಇತ್ತು. ಆತನು ಮುಂಜಾ ವಿನಿಂದ ಮಧ್ಯಾಹ್ನದ ವರೆಗೆ ಪರಸ್ತ್ರೀಯರನ್ನು ಪಾಪಬುದ್ಧಿಯಿಂದ ನೋಡುವ ಮಾನಸಿಕ ತಪಶ್ಚರ್ಯವನ್ನು ಮಾಡಿದ ಬಳಿಕ ಮಧ್ಯಾ ಹ್ನದಿಂದ ಸಂಜೆಯ ವರೆಗೆ ಊರೊಳಗಿನ ಗುಡಿ ಗುಂಡಾರಗಳನ್ನೆಲ್ಲ ಅಲೆಯುತ್ತ ದೇವದರ್ಶನಕ್ಕಾಗಿ ಬರುವ ಸ್ತ್ರೀಯರ ಗುಂಪಿನಲ್ಲಿ ಸೇರಿ ಅವರ ಸ್ಪರ್ಶಸುಖವನ್ನು ಹೊಂದುವ ಕಾಯಿಕ ತಪ ಸ್ಸನ್ನು ಮಾಡುತ್ತಿದ್ದನು ಒಮ್ಮೊಮ್ಮೆ ಆತನಿಗೆ ಈ ತಪಸ್ಸಿನಲ್ಲಿ ಜನ ರಿಂದ ಇಲ್ಲವೆ ಪೋಲೀಸಜನರಿಂದ ವ್ಯೆಪುರಿ ಲತ್ತಾಪ್ರಹಾರಗಳೂ ಬೀಳುತ್ತಿದ್ದವು!

ಹೊತ್ತು ಮುಳುಗಿ ಕತ್ತಲಾಯಿತೆಂದರೆ ಆತನ ವಾಕ್‌ತಪ ಸ್ಸಿಗೆ ಪ್ರಾರಂಭವಾಗುತ್ತಿತ್ತು. ಈ ತಪಸ್ಸೇ ಆತನಿಗೆ ಕಾಮಧೇನು ಕಲ್ಪವೃಕ್ಷವು. ರಾತ್ರಿಯಲ್ಲಿ ಹನ್ನೊಂದು ಹೊಡೆಯುವ ವರೆಗೆ ಅವ- ನು ಏಕನಿಷ್ಠೆಯಿಂದ ಧನೋತ್ಪಾದನದ ಈ ಮುಖ್ಯ ಕೆಲಸವನ್ನು ಮಾಡುತ್ತಿದ್ದನು. "ತನ್ನ ಕೈಯೊಳಗಿನ ದುಡ್ಡು ಹೋಗಬಾರದು; ವಾರಾಂಗನೆಯರ ಪ್ರೇಮಸಂಪಾದನೆಯಾಗಬೇಕು. ಅಂದರೇ ಪುರು ಷಾರ್ಥ ಸಾಧಿಸಿದಂತಾಗುವದು" ಎಂಬ ಮಹಾ ವಾಕ್ಯಾನುಸಾರ ವಾಗಿ ಬಟುಕನು ವಾರಾಂಗನೆಯರ ದಲ್ಲಾಲಿಯನ್ನು ವಹಿಸಿ, ಅಪ್ರ

ಬುದ್ಧ ಶ್ರೀಮಂತ ಹುಡುಗರ ಮನವೊಲಿಸಿ ಅವರನ್ನು ಆ ವಾರವನಿತೆಯರ ವಶಕ್ಕೊಪ್ಪಿಸುತ್ತಿದ್ದನು. ಅಬಗ್ಗೆ ಬಟುಕನಿಗೆ ವಾರಾಂಗನೆಯರ ಉತ್ಪನ್ನದಲ್ಲಿ ನಾಲ್ಕನೇ ಪಾಲು ದೊರೆಯುತ್ತಿತ್ತು. ಇದರ ಹೊರತು ಆತನು ಆ ಮೂರ್ಖತರುಣರಿಂದ ಇನಾಮುಗಳನ್ನು ನೆಗವುತ್ತಿದ್ದುದು ಬೇರೆ. ಈ ಸ್ವತಂತ್ರ ಉದ್ಯೋಗದಿಂದ ಆ ಸದ್ಗೃಹಸ್ಥನು ಕೈಯಲ್ಲಿ ೮-೧೦ ಸಾವಿರ ರೂಪಾಯಿಗಳನ್ನು ಮಾಡಿಕೊಂಡಿದ್ದನು! ಅಹಹ! ಎಂಥ ಲಾಭದಾಯಕ ಉದ್ಯೋಗವಿದು!!

ಈ ಬಟುಕ ಮಹಾಶಯನು ಎರಡು ಲಗ್ನಗಳನ್ನು ಮಾಡಿಕೊಂಡಿದ್ದನು. ಮೊದಲಿನ ಹೆಂಡತಿಯು ಸತ್ತಳು. ಎರಡನೆಯವಳು ಬೇರೊಬ್ಬ ಸದ್ಗೃಹಸ್ಥನ ಸಂಗಡ ಎತ್ತೋ ಪಲಾಯನಹೇಳಿಸಿದಳು. ದ್ವಿತೀಯ ಹೆಂಡತಿಯ ಪಲಾಯನದಿಂದ ಪಾಪ! ಬಟುಕನು ವೈರಾಗ್ಯವನ್ನು ಧರಿಸಿದನು. ಅವನು ಲಗ್ನದ ಉಸಾಬರಿಯನ್ನು ಬಿಟ್ಟು ಒಬ್ಬ ನೀಚಜಾತಿಯ ಸ್ತ್ರೀಯನ್ನು ದಾಸಿಯ ನೆವದಿಂದ ಮನೆಯಲ್ಲಿಟ್ಟುಕೊಂಡು ತನ್ನ ಕಷ್ಟಾರ್ಜಿತದ್ರವ್ಯದ ಉಪಭೋಗವನ್ನು ತಕ್ಕೊಳ್ಳುತ್ತ ಕಾಲಕ್ರಮಿಸುತ್ತಿದ್ದನು. ಆತನಿಗೆ ಸ್ವಂತ ಹಕ್ಕಿನ ಒಂದು ಮನೆಯೂ ಇತ್ತು.

ಬಟುಕನು ಸುಲೋಚನೆಯೊಡನೆ ತನ್ನ ಮನೆಯನ್ನು ಮುಟ್ಟಿದನು. ಆಕೆಯು ಒಳಗೆ ಪ್ರವೇಶ ಮಾಡಿದ ಕೂಡಲೆ ಆತನು ಬಾಗಿಲವನ್ನಿಕ್ಕಿ ಚಿಲಕವನ್ನು ಹಾಕಿದನು. ಆ ಕಾಲಕ್ಕೆ ಮನೆಯಲ್ಲಿ ಬಟುಕನ ದಾಸಿಯೂ ಇದ್ದಿಲ್ಲ. ಚಿಗಪ್ಪನು ಬಾಗಿಲು ಹಾಕುವದನ್ನು ನೋಡಿ ಸುಲೋಚನೆಯು —“ಕಾಕಾ, ಹೀಗೇಕೆ ಬಾಗಿಲ ಹಾಕುವಿರಿ?” ಎಂದಳು.

ಬಟುಕನು (ನಕ್ಕು)—ಗಾಬರಿಯಾಗಬೇಡ; ಈ ಮನೆಯು ನಿನ್ನದೇ ಇರುತ್ತದೆ. ಉಪ್ಪರಿಗೆಯ ಮೇಲೆ ನಡೆ; ಅಲ್ಲಿ ವಾಸುದೇ

ವನು ನಿನ್ನ ದಾರಿಯನ್ನು ಕಾಯುತ್ತ ಕುಳಿತಿರುವನು.

ಸುಲೋಚನೆಯು ನಿರ್ವಿಕಲ್ಪ ಮನಸ್ಸಿನಿಂದ ಪಾವಟಿಗೆಗಳ ನ್ನೇರಿ ಉಪ್ಪರಿಗೆಯ ಮೇಲೆ ಹೋದಳು. ಆದರೆ ವಾಸುದೇವನು ಆಕೆಗೆ ಎಲ್ಲಿಯೂ ಕಾಣಲಿಲ್ಲ. ಆಗ ಮಾತ್ರ ಅವಳ ಎದೆಯು ಧಸ್ಸೆಂದಿತು! ಅವಳು ಹೊರಳಿ ನೋಡುವಷ್ಟರಲ್ಲಿ ಬಟುಕನು ಉಪ್ಪರಿಗೆಯ ಬಾಗಿಲವನ್ನಿಕ್ಕಿ ಒಳಚಿಲಕವನ್ನು ಹಾಕುತ್ತಿದ್ದನು. ಸುಲೋಚನೆಯ ಕೈಕಾಲುಗಳು ತಣ್ಣಗಾದವು!

ಬಾಗಿಲವನ್ನಿಕ್ಕಿ ಬಟುಕನು ಒಳಗೆ ಬಂದು ತಟಸ್ಥಳಾಗಿ ನಿಂತಿರುವ ಸುಲೋಚನೆಯ ಚರಣಗಳ ಮೇಲೆ ಮಸ್ತಕವನ್ನಿಟ್ಟು ನುಡಿದನೇನಂದರೆ—"ಸುಂದರೀ, ಮನಮೋಹಿನೀ, ಪ್ರಿಯೇ, ನನ್ನ ಪ್ರಾಣಗಳನ್ನು ಸಂರಕ್ಷಿಸು. ಈ ದಾಸ............"

ಈ ಪ್ರಕಾರವನ್ನು ನೋಡಿ ಸುಲೋಚನೆಯು ಸ್ತಂಭಿತಳಾದಳು. ಆಗ ಅವಳು ಧೈರ್ಯದಿಂದ—

ಸುಲೋಚನೆ—ಕಾಕಾ, ನಾನು ನಿಮ್ಮ ಮಗಳಲ್ಲವೇ? ಇದೇನು?

ಬಟುಕ—ಸುಂದರೀ, ಸುಲೋಚನೆ, ನನ್ನ ಮೇಲೆ ಸಿಟ್ಟಾಗಬೇಡ ಕಂಡಿಯಾ? ನಾನು ನಿನ್ನ ದಾಸನು; ನನ್ನ ಮೇಲೆ ದಯಮಾಡು. ಇತ್ತ ನೋಡು: ನನ್ನ ಬಾಹುಗಳು ನಿನ್ನ ಆಲಿಂಗನದ ಸಮಯವನ್ನು ನಿರೀಕ್ಷಿಸುತ್ತಿರುವವು. ಪ್ರಿಯೇ, ನನ್ನ ಪ್ರಾಣಗಳನ್ನು ಉಳಿಸುವದು, ಬಿಡುವದು ಸರ್ವಸ್ವೀ ನಿನ್ನ ಕೈಯಲ್ಲಿರುವದು. ಕೋಮಲಾಂಗೀ, ನನಗೆ ಹಿಂದು ಮುಂದೆ ಯಾರಿರುವರು? ನನ್ನ ಎಲ್ಲ ಆಸ್ತಿಗೆ ನೀನೇ ಬಾಧ್ಯಸ್ಥಳಲ್ಲವೇ? ನೀನು ನನ್ನವಳಾದರೆ ನಿಮ್ಮೆಲ್ಲರ ಕಷ್ಟವು ಹಾ ಹಾ ಅನ್ನುವಷ್ಟರಲ್ಲಿ ತಪ್ಪುವದು. ಮೇಲಾಗಿ ನಿನಗೆ ನಾನು............ಆಗಬೇಕಾದ್ದರಿಂದ ಲೋಕಾಪವಾದವು ನಿನಗೆ ಬರಲಿಕ್ಕಿಲ್ಲ. ಯಾಕೆ, ಸುಮ್ಮನೆ ನಿಂತುಕೊಂಡೆ? ಸುಂದರೀ, ಈ ನವ

ಯೌವನವನ್ನು ವ್ಯರ್ಥವಾಗಿ ಕಳಕೊಳ್ಳಬೇಡ."

ಸುಲೋಚನೆ(ನಡುಗುವ ದನಿಯಿಂದ)—ಶಿವ! ಶಿವ! ಕಾಕಾ, ಈ ದಿನ ನಮ್ಮ ಅಣ್ಣಾನಿದ್ದರೆ, ಇಷ್ಟು ನಿನ್ನ ಧೈರ್ಯವಾಗುತ್ತಿತ್ತೇನು? ನಾವು ಅನಾಥ ಹೆಂಗಸರೆಂದು ತಿಳಿದು ಈ ನೀಚ ಕೃತ್ಯಕ್ಕೆ ಪ್ರವೃತ್ತನಾದೆಯಾ! ಹಾಯ್! ಹಾಯ್! ಇಂಥ ಅಧಮತನದಿಂದ ಆಚಂದ್ರಾರ್ಕನರಕದಲ್ಲಿ ಬೀಳಬೇಡ. ನಾನು ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ. ನನಗೆ ಇಲ್ಲಿಂದ ಹೊರಗೆ ಹೋಗಗೊಡು".

ಬಟುಕ(ನಿರ್ಲಜ್ಜೆಯಿಂದ)—ಅಹಾ! ಸುಂದರೀ ನಿನ್ನ ಅಧರಗಳು ಎಷ್ಟು ಮನೋಹರವಾಗಿರುವವು? ಬ್ರಹ್ಮದೇವನ ಈ ಕೌಶಲ್ಯವನ್ನು ವ್ಯರ್ಥವಾಗ ಮಾಡುವೆಯಾ? ಛೀ, ನನ್ನಿಂದ ನಿನ್ನನ್ನು ಹಾಗೇ ಬಿಡುವದು ಎಂದಿಗೂ ಆಗದು. ಪ್ರಿಯೇ, ವ್ಯರ್ಥವಾಗಿ ಕೋಪ ಮಾಡಬೇಡ, ಅದರಿಂದ ಪ್ರಯೋಜನವಾಗುವಂತಿಲ್ಲ; ಯಾಕಂದರೆ, ನಾನು ನನ್ನ ಆತ್ಮಹತ್ಯೆಯನ್ನು ಮಾಡಿಕೊಳ್ಳುವ ನಿನ್ನನ್ನು ಬಿಡುವದಿಲ್ಲ. ಎಂದು ನುಡಿದು ಆ ನಿರ್ಲಜ್ಜನು ಆಕೆಯನ್ನು ಆಲಿಂಗಿಸುವದಕ್ಕಾಗಿ ಮುಂದುವರಿದನು. ಆಗಂತೂ ಸುಲೋಚನೆಯು ತೀರಾ ಗಾಬರಿಯಾದಳು. ಅವಳು ಪರಮೇಶ್ವರನನ್ನು ಕುರಿತು ಮೊರೆಯಿಡ ಲಾರಂಭಿಸಿದಳು. ದಯಾಘನಾ, ಪರಮೇಶ್ವರಾ, ಪ್ರಸಂಗವು ಕಠಿಣವಿರುವದು. ಈ ದೀನ ಅಬಲೆಯ ಮಾನವನ್ನು ನಿನ್ನ ಹೊರತು ಯಾರು ಸಂರಕ್ಷಿಸುವರು? ಎಂದು ಅವಳು ಪ್ರಾರ್ಥಿಸಿದಳು.

ಸುಲೋಚನೆಗೆ ದೇವರು ಹ್ಯಾಗೆ ಧೈರ್ಯವ ಕೊಟ್ಟನೋ, ತಿಳಿಯದು? ಅವಳು ಒಮ್ಮಿಂದೊಮ್ಮೆ ಕ್ರುದ್ಧಳಾದಳು. ಅವಳ ಮೈಯು ಥರಥರ ನಡುಗಲಾರಂಭಿಸಿತು. ಆಗ ಆಕೆಯು ತನ್ನನ್ನು ಆಲಿಂಗಿಸ ಬರುವ ಬಟುಕನ ಟೊಂಕಕ್ಕೆ ಕಸುವಿನಿಂದ ಒದ್ದಳು. ಆಕೆಯ ಆ ತಾಡನದಿಂದ ಬಟುಕನು ನೆಲದಮೇಲೆ ಬಿದ್ದನು. ಕೂಡಲೆ ಅವಳು

ಬಾಗಿಲವನ್ನು ತೆರೆದು ಹೊರಬಿದ್ದು, ಆತನು ಏಳುವಷ್ಟರಲ್ಲಿ ಬಾಗಿಲಕ್ಕೆ ಹೊರಚಿಲಕ ಹಾಕಿ ಮನೆಯ ಹಾದಿಯನ್ನು ಹಿಡಿದಳು. ಮಧ್ಯಾಹ್ನದ ಸಮಯವಿದ್ದದರಿಂದ ಆಕೆಗೆ ಹಾದಿಯಲ್ಲಿ ಗುರ್ತಿನ ಯಾವ ಜನರೂ ಭೆಟ್ಟಿಯಾಗಲಿಲ್ಲ. ಇಬ್ಬರು ಮೂವರು ದುರ್ಜನರುಮಾತ್ರ ಆಕೆಯನ್ನು ಕಂಡು ಚೇಷ್ಟೆಗೆ ಉಪಕ್ರಮಿಸಿದರು. ಆದರೆ ಸುಲೋಚನೆಯು ಬಹು ವೇಗವಾಗಿ ನಡೆಯುತ್ತಿದ್ದರಿಂದ ಅವರ ಚೇಷ್ಟೆಯ ಶಬ್ದಗಳು ಆಕೆಗೆ ಕೇಳಬರಲಿಲ್ಲ. ಮನೆಗೆ ಬಂದ ಬಳಿಕ ಸುಲೋಚನೆಯು ನಡೆದ ಸಂಗತಿಯನ್ನು ಮಾಲತಿಗೆ ತಿಳಿಸಿದಳು. ಪಾರ್ವತಿಯು ಸಿಟ್ಟು ಚಂಡಿಯಾಗಿ ಬಟುಕನ ಮನೆಮುಟ್ಟಿ ಹೋಗಿ, ಅವನ ನಾಲ್ವತ್ತೆರಡು ಕುಲಗಳನ್ನು ಉದ್ಧಾರ ಮಾಡಿದಳು!

ಪ್ರಿಯವಾಚಕರೇ! ನೋಡಿದಿರಾ, ಸಮಯುಗವನ್ನು! ಬಟುಕನಂಥ ನೀಚರು ನಮ್ಮ ಕಣ್ಣಿಗೆ ಪ್ರತಿನಿತ್ಯದಲ್ಲಿಯೂ ಬೀಳುತ್ತಿರುವರಲ್ಲವೇ? ಹಾಯ್! ಹಾಯ್! ನಿರಾಶ್ರಿತರಾದ ನವಯುವತಿಯರು ಮರ್ಯಾದೆಯಿಂದ ಪಾರಾಗುವದು ದುಸ್ತರವು! ಬಲುದುಸ್ತರವು!! ಬಟುಕನಂತೆ ಅನೇಕ ಜನ ದುರ್ಜನರು ಸುಲೋಚನಾದಿ ಸ್ತ್ರೀಯರರನ್ನು ಭ್ರಷ್ಟಗೊಳಿಸಲಿಕ್ಕೆ ಹಲವು ಹಂಚಿಕೆಗಳನ್ನು ಹಾಕುತ್ತಿದ್ದರು. ಇದನ್ನೆಲ್ಲ ಮನಸ್ಸಿನಲ್ಲಿ ತಂದು ಆ ಹೆಂಗಳೆಯರು ಆ ಗ್ರಾಮತ್ಯಾಗ ಮಾಡುವ ಯೋಚನೆಯನ್ನು ಮಾಡಿದರು. ಪಾರ್ವತಿಯ ತವರುಮನೆಯು ಶ್ರೀರಂಗಪಟ್ಟಣದಲ್ಲಿ ಇದ್ದದರಿಂದ ಅಲ್ಲಿಗೆ ಹೋಗಬೇಕೆಂದು ಗೊತ್ತಾಯಿತು. ಮರುದಿನ ಅವರು ಹೊರಡತಕ್ಕವರು, ಅಷ್ಟರಲ್ಲಿ ಆ ದಿನ ಮಧ್ಯರಾತ್ರಿಯಲ್ಲಿ ಎಲ್ಲರೂ ಮಲಗಿಕೊಂಡಾಗ ೧೦-೧೨ ಜನ ದರವಡೆಗಾರರು ವಾಸುದೇವರಾಯನ ಮನೆಯ ಬಾಗಿಲವನ್ನು ಒಡೆದು ಒಳಹೊಕ್ಕು ಸುಲೋಚನೆಯು [illegible] ತ[illegible]ಯನ್ನು ಅರಿ[illegible]ದರೆ ನಮ್ಮ ಕಥಾನಾಯಿಕೆಯಾದ ಮನೋರಮೆಯನ್ನು ಬಾಯಲ್ಲಿ

ಅರಿವೆ ತುರುಕಿ ಹೊತ್ತುಕೊಂಡು ಹೋದನು. ಹಂ! ಹಂ! ಅನರ್ಥದ ಮೇಲೆ ಅನರ್ಥ! ವಿಪತ್ತಿನ ಮೇಲೆ ವಿಪತ್ತು!! ಹಾಯ್! ಸುಲೋಚನೆಯೇ ಮೊದಲಾದ ನಿರಾಶ್ರಿತ ಹೆಂಗಸರ ಹೃದಯವಿದಾರಕವೇದನೆಯನ್ನು ಎಷ್ಟೆಂದು ವರ್ಣಿಸಬೇಕು? ಮರುದಿನ ಸುಲೋಚನೆ, ಮಾಲತಿ, ಸೌಮಿತ್ರಿ, ಕಾದಂಬಿನಿ, ಪಾರ್ವತಿಯರು ರಾಮಕೋಟೆಗೆ ತಲೆಹೊಡೆದು ದುಃಖದಿಂದ ಪ್ರಾಣಗಳನ್ನು ತ್ಯಜಿಸಿದರು.

ಇಲ್ಲಿ ನಮ್ಮ ವಾಚಕರಿಗೆ ತಿಳಿಸತಕ್ಕದ್ದೇನೆಂದರೆ ಶ್ರೀರಂಗಪಟ್ಟಣದ ಕಾವೇರಿಯ ತೀರದಲ್ಲಿ ಒಬ್ಬ ನವಾಬಸಾಹೇಬನು ಯಾವ ಬಾಲಿಕೆಗೆ ಕಲಶವನ್ನು ತೆಗೆದುಕೊಟ್ಟನೋ ಆ ಬಾಲಿಕೆಯು ಬೇರೆ ಯಾವಳೂ ಇರದೆ ನಮ್ಮ ಕಥಾನಾಯಿಕೆಯ ತಂಗಿಯಾದ ಕಾದಂಬಿನಿಯೇ ಆಗಿರುವಳು!

| 9 |

ಪಾಪಿಷ್ಠನಾದ ಒಟಕನು ಮರುದಿನ ಬೆಳಗಾದ ಮೇಲೆ ಎದ್ದು ನೋಡುವಷ್ಟರಲ್ಲಿ ವಾಸುದೇವರಾಯನ ಮನೆಯು ತೆರವಾಗಿತ್ತು. ಆಗ ಆತನು—"ಪಕ್ಷಿಗಳು ಹಾರಿಹೋದವು" ಎಂದು ನುಡಿದು ಮನದಲ್ಲಿ ಬಹಳವಾಗಿ ಚಡಪಡಿಸಿದನು. ಅವನಂತೆ ನೀಚಹೃದಯವುಳ್ಳ ಕೆಲಜನರು ಸುಲೋಚನಾದಿ ಸ್ತ್ರೀಯರಲ್ಲಿ ಪಾಪಬುದ್ಧಿಯನ್ನು ತಾಳಿದ್ದರಿಂದ ಅದರ ಪ್ರಾಯಶ್ಚಿತ್ತವೆಂದು ಅವರೂ ತಳಮಳಗೊಂಡರು. ಅವರಲ್ಲಿ ಅತಿ ದುರ್ಜನರಾದವರು ಆ ಹೆಂಗಸರು ಎಲ್ಲಿಗೆ ಹೋದರೆಂಬುದನ್ನು ಗೊತ್ತುಹಚ್ಚುವದಕ್ಕಾಗಿ ಬಹಳ ಪ್ರಯತ್ನ ಮಾಡಿದರು. ಆದರೆ ಅವರ ಇಚ್ಛೆಯು ಕೊನೆಗೆ ಕೈಗೂಡಲಿಲ್ಲ.

ಪ್ರಿಯವಾಚಕರೇ, ಹಿಂದೆ ಹೇಳಿದಂತೆ ಕಷ್ಟಗಳನ್ನು ಅನುಭವಿಸಿದ ಆ ಅನಾಥ ಹೆಂಗಸರು ದುರ್ಜನರ ಕೈಗಳಿಂದ ಒಮ್ಮೆ

ಪಾರಾಗಿ ರಾಮಕೋಟೆಯನ್ನು ಬಿಟ್ಟು ಶ್ರೀರಂಗಪಟ್ಟಣಕ್ಕೆ ಬಂದ ರಷ್ಟೆ; ಆದರೆ ದುರ್ದೈವದ ಮುಂದೆ ಯಾರು ಓಡುವರು? ನಿರಾಶ್ರಿತ ರಾದ ತರುಣಹೆಂಗಸರು ಎಲ್ಲಿದ್ದರೂ ಅವರಿಗೆ ದುರ್ಜನರಿಂದ ಉಪ ಹತಿಯಾಗುವದು ಸ್ವಾಭಾವಿಕವಾಗಿರುವದು! ಇರಲಿ, ಶ್ರೀರಂಗಪಟ್ಟ ಣದಲ್ಲಿ ಅವರು ಒಂದು ಸಣ್ಣ ಮನೆಯನ್ನು ಬಾಡಿಗೆಯಿಂದ ಹಿಡಿದು ಅವರಲ್ಲಿರತೊಡಗಿದರು. ಮಾಲತಿಯಲ್ಲಿ ತನ್ನ ಮಾರಗುತಿಯನ್ನು ಮಾರಿದ ಕೆಲವು ರೂಪಾಯಿಗಳು ಉಳಿದು ಇದ್ದವು. ಅವುಗಳಿಂದ ಅವರ ಉಪಜೀವನವು ಕೆಲವು ದಿನಗಳ ಮಟ್ಟಿಗೆ ಹಾಗೂ ಹೀಗೂ ಸಾಗಿತು. ಪುನಃ ಅವರ ದುರ್ದೆಶೆಗೆ ಪ್ರಾರಂಭವಾಯಿತು. ಒಂದು ಉಪವಾಸ ಎರಡು ಉಪವಾಸಗಳು ನಡೆದವು; ಆಗ ಆ ಎಲ್ಲ ಹೆಂಗ ಸರು ಕೂಡಿ ವಿಚಾರ ಮಾಡತೊಡಗಿದರು. ಒಂದರ ನಿಶ್ಚಯವೂ ಆಗಲೊಲ್ಲದು ಕಡೆಗೆ ಮಾಲತೀಯು—ಸನಾದಿನಿಯವರೇ, ಈ ಪಾಪಿಯಾದ ಹೊಟ್ಟೆಯ ಸಲುವಾಗಿ ಹ್ಯಾಗೆ ಮಾಡೋಣ! ಮನೆ ಯಲ್ಲಿ ಕುಳಿತು ಕಸೂತಿಯನ್ನು ತೆಗೆಯಲಿಕ್ಕೆ ಶೇರಿವೆಯಿಲ್ಲ; ಕೊಳ್ಳ ಲಿಕ್ಕೆ ಹಣವಿಲ್ಲ. ಆದರೆ ನಾವು ನಮ್ಮ ಮರ್ಯಾದೆಯನ್ನು ಕಾಯ್ದು ಕೊಂಡು ಒಂದು ಸಭ್ಯಗೃಹಸ್ಥರ ಕುಟುಂಬದಲ್ಲಿ ದಾಸಿಯ ಕೆಲಸವನ್ನು ಮಾಡಿದರೆ ತಪ್ಪೇನು? ಎಂದು ನುಡಿದಳು.

ಸುಲೋಚನೆಯ ಕಣ್ಣುಗಳಲ್ಲಿ ನೀರು ಒಳ ಬಳ ಉದುರಿದವು; ಆ ಅತ್ತೆ ಸನಾದಿನಿಯರು ಪರಸ್ಪರ ತೆಕ್ಕೆಬಿದ್ದು ಒಂದು ಕ್ಷಣಹೊತ್ತು ಘೋರವಾಗಿ ಅತ್ತರು; ಬರಿಯ ಅಳುವದರಿಂದ ಅವರ ಕಷ್ಟವು ಓಂ ಗುವಂತೆ ಇದ್ದಿಲ್ಲಾದ್ದರಿಂದ ಸುಲೋಚನೆಯು ಸಾವರಿಸಿಕೊಂಡು-- ಅತ್ತೆಗೀ, ಎಷ್ಟು ಕಠಿಣ ಕಾಲ ಬಂತಪ್ಪಾ; ನಮ್ಮ ಮರ್ಯಾದೆಯು ಹ್ಯಾಗೆ ಉಳಿದೀತು? ದೊಡ್ಡ ಮನೆತನದ ಒರಿಯ ಸೊಸೆಯಾದ ನೀನು ಈಗ ಪರರ ಮನೆಯಲ್ಲಿ ದಾಸಿಯಾಗಿ ಜೀವಿಸಬೇಕಾಯಿತೇ?

ಅಕಟಕಟಾ! ನಮ್ಮ ದುರ್ದೈವಕ್ಕೆ ಧಿಃಕಾರವಿರಲಿ! ಅತ್ತಿಗೀ, ಬೇಡ ವ್ವಾ, ಬೇಡ; ನೀನು ಪರರ ಮನೆಯಲ್ಲಿ ದಾಸಿಯಾಗಬೇಡ; ನಿನ್ನ ಬದಲು ನಾನು ದಾಸಿಯ ಕೆಲಸವನ್ನು ಮಾಡುವೆನು; ನಾನು ಹ್ಯಾಗಿ ದ್ದರೂ ವಿಧವೆಯು!! ವಿಧವೆಯರಿಗೆ ನಾಚಿಕೆ....ಎಂದು ನುಡಿಯು ತ್ತಿರಲು ಅವಳ ಕಂಠವು ತುಂಬಿಬಂದಿತು. ಅವಳ ಬಾಯಿಂದ ಅಕ್ಷ ರಗಳು ಹೊರಡದಾದವು! ಪಾಪ! ಆ ಸಾಧ್ವಿಯು ಬಹಳ ಹೊತ್ತಿನ ವರೆಗೆ ಮುಳುಮುಳು ಅತ್ತಳು! ಮಾಲತಿ-ಕಾದಂಬಿನಿಯರೆಲ್ಲರೂ ಅತ್ತರು ಅವರೆಲ್ಲರ ಸೀರೆಯ ಸೆರಗುಗಳು ತಪ್ಪನೆ ತೊಯ್ದವು! ಶೋಕಭಾರದಿಂದ ಕಲುಷಿತವಾದ ನೀರೆಲ್ಲ ಒಮ್ಮೆ ನೇತ್ರದ್ವಾರದಿಂದ ಹೊರಟುಹೋದಬಳಿಕ ಆ ಸ್ತ್ರೀಯರು ಸ್ವಲ್ಪ ಸಮಾಧಾನವನ್ನು ತಾಳಿ ಪರರ ದಾಸ್ಯವನ್ನು ಮಾಡದಿದ್ದರೆ ಗತ್ಯಂತರವಿಲ್ಲೆಂದು ನಿಶ್ಚ ಯಿಸಿದರು.

ಪಾರ್ವತಿಯು ಈ ಮೊದಲೇ ಒಬ್ಬ ಗೃಹಸ್ಥನ ಮನೆಯಲ್ಲಿ ಚಾಕರಿಯನ್ನು ಹಿಡಿದಿದ್ದಳು. ಆಕೆಯು ಪ್ರಯತ್ನ ಮಾಡಿ ಸುಲೋ ಚನೆಗೊಂದು, ಕಾದಂಬಿನಿಗೊಂದು ಹೀಗೆ ಎರಡು ನೌಕರಿಗಳನ್ನು ಗೊತ್ತುಪಡಿಸಿಕೊಂಡು ಬಂದಳು. ಸೌದಾಮಿನಿಯು ದುಃಖಿತ ಮಾಲ ತಿಯ ಜೊತೆಗೆ ಮನೆಯಲ್ಲಿರಬೇಕೆಂದು ಗೊತ್ತಾಯಿತು. ಕಾದಂಬಿ ನಿಯು ಪ್ರತಿತಿಂಗಳಿಗೆ ೨ ರೂಪಾಯಿ ಸಂಬಳದ ಮೇಲೆ ಒಬ್ಬ ಗೃಹ ಸ್ಥನ ಮನೆಯಲ್ಲಿ ಚಾಕರಿಗೆ ನಿಂತಳು. ಆ ಚಾಕರಿಯ ಮೇಲಿರು ವಾಗಲೇ ಕಲಶದ ನಿಮಿತ್ತದಿಂದ ಬಾಬಾಸಾಹೇಬನಿಗೂ ಆಕೆಗೂ ದೃಢಪರಿಚಯವಾಯಿತು!

ಸುಲೋಚನೆಯು ರಾಮಕೋಟೆಯಲ್ಲಿದ್ದಾಗ ಆಕೆಯ ವಿಷಯ ವಾಗಿ ಕಾಲಿಂದಿಯ ಮಗನಾದ ಶ್ರೀಪತಿಯು ಪಾಪಬುದ್ಧಿಯನ್ನು ತಾಳಿದ್ದನಷ್ಟೇ; ಆಕೆಯು ಶ್ರೀರಂಗ ಪಟ್ಟಣಕ್ಕೆ ಹೋದ ಸಂಗತಿಯು

ನ್ನು ಆತನು ಬಹು ಪ್ರಯಾಸದಿಂದ ಗೊತ್ತು ಹಚ್ಚಿ ತನ್ನ ಪಾಪ ವಾಸನೆಯನ್ನು ತೃಪ್ತಿಬಡಿಸಿಕೊಳ್ಳುವದಕ್ಕಾಗಿ ತಾನೂ ಅಲ್ಲಿಗೆ ಹೋದನು. ಆಕೆಯ ವಿಷಯವಾಗಿ ಅವನು ಅತ್ಯಂತ ಮೋಹವನ್ನು ತಾಳಿದ್ದನು. ಒಳ್ಳೇ ಪ್ರಾಯ; ಸ್ವಂತ ಮನೆಯಲ್ಲಿ ಸ್ತ್ರೀ-ಮಂತಿಕೆಯು! ಕೇಳುವದೇನು? ಶ್ರೀಪತಿಯು, ಸುಲೋಚನೆಯು ಹುಚ್ಚಿಸಿಂದ ಶ್ರೀರಂಗಪಟ್ಟಣದಲ್ಲಿ ಒಂದು ಸುಂದರವಾದ ಮನೆಯನ್ನು ಕೊಂಡುಕೊಂಡು ಅದರಲ್ಲಿರಹತ್ತಿದನು. ಅವನು ರಾಮಕೋಟಿಯಿಂದ ಹೋಗುವಾಗ ಒಬ್ಬ ವೇಶ್ಯೆಯನ್ನು ಸಂಗಡ ಕರಕೊಂಡು ಹೋಗಿದ್ದನು. ಆತನು ಆ ವೇಶ್ಯೆಯೊಡನೆ ಶ್ರೀರಂಗಪಟ್ಟಣದಲ್ಲಿ ಸಂಭಾವಿತ ಗೃಹಸ್ಥನಂತೆ ವೇಷವನ್ನು ತಳೆದು ಸಂಸಾರವ ಮಾಡುತ್ತಿರಲು ನೋಡುವವರಿಗೆ ಅವರು ಗಂಡಹೆಂಡರಂತೆ ತೋರುತ್ತಿದ್ದರು. ಸುಲೋಚನೆಗೆ ನೌಕರಿಯನ್ನು ಹುಡುಕುತ್ತಿದ್ದ ಪಾರ್ವತಿಯು ಕರ್ಮಧರ್ಮ ಸಂಯೋಗದಿಂದ ವೇಷಾಂತರ ಮಾಡಿದ ಶ್ರೀಪತಿಯ ಮನೆಗೆ ಬಂದಳು. ಪಾರ್ವತಿಯ ಮಾತನ್ನು ಕೇಳಿ ಶ್ರೀಪತಿಗೆ ಅತಿಶಯವಾದ ಆನಂದವಾಯಿತು. ತಾನು ಯಾವ ಕಾರ್ಯಕ್ಕಾಗಿ ರಾಮಕೋಟಿಯಿಂದ ಇಲ್ಲಿಗೆ ಬಂದಿದ್ದನೋ ಆ ಕಾರ್ಯವು ಅನಾಯಾಸವಾಗಿ ಆಗುವ ಯೋಗವು ಬಂದದ್ದರಿಂದ ಅವನಿಗೆ ಅಷ್ಟು ಆನಂದವಾದದ್ದು ಸ್ವಾಭಾವಿಕವಾಯಿತು ಆಗ ಆ ಮುದುಕಿಗೆ ಸಂಶಯ ಬಾರದಂತೆ ಒಳಗೆ ಹೋಗಿ ಏನೇನೋ ವಿಚಾರ ಮಾಡಿಕೊಂಡು ಬಂದವನಂತೆ ನಟಿಸಿ, ಸುಲೋಚನೆಯನ್ನು ತನ್ನ ಮನೆಯಲ್ಲಿಟ್ಟುಕೊಳ್ಳುವದಾಗಿ ಒಪ್ಪಿಕೊಂಡನು. ಮರುದಿನ ಸುಲೋಚನೆಯು ಶ್ರೀಪತಿಯ ಮನೆಗೆ ದಾಸಿಯ ಕೆಲಸವನ್ನು ಮಾಡಲಿಕ್ಕೆ ಬಂದಳು! ಹಾಯ್! ದೊಡ್ಡ ಕುಲದ ಓರ್ವ ಸುಶೀಲ ಸ್ತ್ರೀಯು ತಿಂಗಳೊಂದಕ್ಕೆ ಮೂರೇ ರೂಪಾಯಿಗಳನ್ನು

ತಕ್ಕೊಂಡು ಪಾಠಾಂಗನೆಯ ಸೇವೆಯನ್ನು ಮಾಡತೊಡಗಿದಳು. ಹಾಯ್! ಹಾಯ್! ಹೋತ್ತು ಹೋಲಿಯನ ಮನೆಹೊಗಿಸಿತು!!

ಈ ಪ್ರೇರಿಗೆ ನೌಕರಿಯನ್ನು ಒಡಿದ ಸುಲೋಚನೆ-ಕಾದಂಬಿನಿಯರು ಮುಂಜಾವಿನಿಂದ ಸಂಜೆಯ ವರೆಗೆ ದುಡಿದು ಸಂಜೆಯ ೬ ಗಂಟೆಗೆ ಮನೆಗೆ ಬರುತ್ತಿದ್ದರು ಪಾರ್ವತಿಯು ತನ್ನ ಕೆಲಸ ತೀರಿದ ಬಳಿಕ ದಿನಾಲು ಅವರಿಬ್ಬರನ್ನು ಕರಕೊಂಡು ಬರುತ್ತಿದ್ದಳು ಹೀಗಿರುತ್ತಿರಲು, ಸುಲೋಚನೆಯ ಮೇಲೆ ಪಾಪವಾಸನೆಯುಳ್ಳ ಶ್ರೀಪತಿಯು ಆಕೆಯ ಮನಸ್ಸೊಲಿಸುವದಕ್ಕಾಗಿ ಹಂಚಿಕೆಹಾಕಹತ್ತಿದನು. ಆ ಸುಂದರಿಯು ಆಯತ ತನ್ನ ಕೈಗೆ ಬಿದ್ದದ್ದಕ್ಕಾಗಿ ಅವನು ದೇವರನ್ನು ಬಹಳವಾಗಿ ಕೊಂಡಾಡುತ್ತಿದ್ದನು. ಸುಲೋಚನೆಯು ತನ್ನ ಸಾಪೇಕ್ಷಾಯಕ್ಕೆ ಒಲಿಯದಿದ್ದರೆ ಬಲಾತ್ಕಾರದಿಂದಾದರೂ ತನ್ನ ಕೆಲಸ ಮಾಡಿಕೊಳ್ಳಲಿಕ್ಕೆ ಬರುತ್ತದೆಂದು ಆ ನೀಚನು ಭಾವಿಸಿದ್ದನು. ಇರಲಿ; ಅವನು ಸುಲೋಚನೆಯನ್ನು ಬಹು ಪ್ರೇಮದಿಂದ ನಡಿಸಿಕೊಳ್ಳುತ್ತಿದ್ದನು. ಆಕೆಗೆ ವಿಶೇಷವಾಗಿ ಕೆಲಸ ಹೇಳುತ್ತಿದ್ದಿಲ್ಲ. ಶೀರೆ-ಕುಪ್ಪಸಗಳನ್ನೂ ಸಮೀಚೀನವಾದ ಆಹಾರದ ಪದಾರ್ಥಗಳನ್ನೂ ಅವಳಿಗೆ ಒದಗಿಸಿಕೊಡುತ್ತಿದ್ದನು. ಈ ಪ್ರಕಾರ ದುರ್ಬುದ್ಧಿಯ ಶ್ರೀಪತಿಯು ಸುಲೋಚನೆಯ ಮನವೊಲಿಸುವದಕ್ಕಾಗಿ ಈ ರೀತಿ ಪ್ರಯತ್ನಮಾಡುತ್ತಿರಲು, ಇತ್ತ ಕಾದಂಬಿನಿಯು ದುಡಿಯುತ್ತಿದ್ದ ಮನೆಯ ಯಜಮಾನನ ಮಗನು ಆ ಸುಕುಮಾರಿಯ ವಿಷಯವಾಗಿ ಪಾಪಬುದ್ಧಿಯನ್ನು ತಾಳಿ ಅವಳಿಗೆ ಅತಿಶಯವಾಗಿ ತ್ರಾಸಕೊಡುತ್ತಿದ್ದನು. ಉದ್ದೇಶವಿಷ್ಟೇ; ಅಸಹ್ಯವಾದ ತ್ರಾಸದಿಂದ ಅವಳು ತನಗೆ ಅನುಕೂಲವಾಗಬೇಕೆಂಬದು!

ಪಾಪ! ಕಾದಂಬಿನಿಯು ತಮ್ಮ ನಿರಾಶ್ರಿತ ಸ್ಥಿತಿಯನ್ನು ಮನಸ್ಸಿನಲ್ಲಿ ತಂದು, ತನ್ನ ಕಷ್ಟವನ್ನು ಮೌನದಿಂದ ಸಹನಮಾಡುತ್ತಿ

ದ್ದಳು. ತನ್ನ ಚಾಕರಿಯು ಹೋದೀತೆಂಬ ಅಂಜಿಕೆಯಿಂದ ಅವಳು ಒಂದು ತುಟಿ ಎರಡು ಮಾಡುತ್ತಿದ್ದಿಲ್ಲ. ಆಕೆಯು ತನ್ನ ಈ ದುಃಖ ಮಯಸ್ಥಿತಿಯನ್ನು ಸುಲೋಚನೆ ಮೊದಲಾದವರಿಗೆ ಸಹ ಹೇಳುತ್ತಿದ್ದಿಲ್ಲ; ಪಾರ್ವತಿಯು ಮಾತ್ರ ಅವಳ ಮನೋವ್ಯಥೆಯನ್ನು ಕಂಡು ಒಡೆದು ಅವಳಿಗೆ ಇನ್ನೊಂದು ಸ್ಥಳನೋಡುತ್ತೇನೆಂದು ಆಗಾಗ್ಗೆ ಧೈರ್ಯವ ಹೇಳುತ್ತಿದ್ದಳು

ಬಾಬಾಸಾಹೇಬನ ಭೆಟ್ಟಿಯಾದ ಬಳಿಕ ಪಾರ್ವತಿಯ ಆನಂದಕ್ಕೆ ಮೇರೆಯುಳಿಯಲಿಲ್ಲ. ಕಾದಂಬಿನಿಯು ಕಲಶವನ್ನು ತೆಗೆದು ಕೊಟ್ಟು ತನ್ನ ಕೋಮಲ ಹೃದಯವನ್ನು ಅವನು ಬೈಲಿಗಿಡಲು ಆತನ ಸೌಜನ್ಯಕ್ಕೆ ಆಕೆಯು ಬಹಳವಾಗಿ ಮೆಚ್ಚಿದಳು. ಮತ್ತು ಕಾದಂಬಿನಿಯು ದೈವವು ತೆರೆಯಿತೆಂದು ಮನಸ್ಸಿನಲ್ಲಿ ಹಿಗ್ಗಿದಳು.

ಮನೆಗೆ ಬಂದ ಬಳಿಕ ಪಾರ್ವತಿಯು ನಡೆದ ಸಂಗತಿಯನ್ನು ಮಾಲತಿ ಹಾಗು ಸುಲೋಚನೆಯರಿಗೆ ತಿಳಿಸಿದಳು ಇಷ್ಟು ದಿವಸಗಳ ವರೆಗೆ ಕಾದಂಬಿನಿಯು ಪಟ್ಟ ಕಷ್ಟವನ್ನು ಕೇಳಿ ಅವರಿಬ್ಬರಿಗೂ ದುಃಖವೂ ಆಶ್ಚರ್ಯವೂ ಆದವು; ಆಗ ಸುಲೋಚನೆಯು ಕಾದಂಬಿನಿಯ ಗಲ್ಲ-ತುಟಿಗಳನ್ನು ಒಡಿದು—ತಂಗೀ, ಕದಂಬ, ಇಷ್ಟು ದಿವಸ ಯಾಕೆ ಹೇಳಲಿಲ್ಲವವ್ವಾ? ಎರಡನೆಯ ಕಡೆಗೆ ನಿನಗೆ ಚಾಕರಿಯು ಸಿಗದಿದ್ದರೂ ನಮಗೆ ಸಂತೋಷವಿತ್ತು! ನಿನ್ನನ್ನು ಆ ನೀಚರ ಮನೆಯಲ್ಲಿ ಒಂದರಕ್ಷಣ ಕೂಡ ಇರಗೊಡುತ್ತಿದ್ದಿಲ್ಲ ಕಂಡೆಯಾ!! ಎನಲು ಕಾ-ದಂಬಿನಿಯು—"ಅಕ್ಕಾ, ನಾನು ಅಲ್ಲಿ ಇರದಿದ್ದರೆ ಸಜ್ಜನನಾದ ಬಾಬಾಸಾಹೇಬನ ಭೆಟ್ಟಿಯು ನನಗೆ ಹ್ಯಾಗೆ ಆಗುತ್ತಿತ್ತು?

ಆಕೆಯ ಈ ಮಾತನ್ನು ಕೇಳಿ ಎಲ್ಲರೂ ನಕ್ಕರು. ಮಾಲತಿಯು ಕಾದಂಬಿನಿಯ ಮೋರೆಯನ್ನು ಮೇಲಕ್ಕೆತ್ತಿ ನುಡಿದಳೇಸಂ-ದರೆ—ಅಹಾ! ನಮ್ಮ ಈ ಬಾಯಿಯವರು ಬಾಬಾಸಾಹೇಬರನ್ನು

ಲಗ್ನಮಾಡಿಕೊಂಡೇಬಿಡುವಂತೆ ಕಾಣುತ್ತದೆ!

ಕಾದಂಬಿನಿಯು ಸಿಟ್ಟಿನಿಂದ ಅಲ್ಲಿಂದ ಹೊರಟು ಹೋದಳು. ಬಳಿಕ ಸುಲೋಚನೆಯು ಪಾರ್ವತಿಯನ್ನು ಕುರಿತು ನುಡಿದಳೇನಂದರೆ—"ಅವರಾ ನಿನ್ನ ಮಾತುಗಳು ಏನೇನಾಗಿರುವವು?

ಪಾರ್ವತಿ—ಪ್ರತಿತಿಂಗಳಿಗೆ ೨೦ ರೂಪಾಯಿಗಳನ್ನೂ ಅನ್ನವಸ್ತ್ರಗಳನ್ನೂ ಕೊಡಲಿಕ್ಕೆ ಬಾಬಾಸಾಹೇಬನು [illegible]ಕೊಂಡಿರುತ್ತಾನೆ. ಕೆಲಸ-ಬೊಗಸೆಗಳ ಸಲುವಾಗಿ ಹೆಚ್ಚು [illegible]ವದಿಲ್ಲ. ಆತನ ಬಳಿಯಲ್ಲಿ ನೌಕರರು ಇದ್ದಂತೆ ತೋರುತ್ತದೆ. ಅಡಿಗೆ ಮಾಡಲಿಕ್ಕೆ ಒಬ್ಬ ಬ್ರಾಹ್ಮಣನಿರುತ್ತಾನೆ. ಕಾದಂಬಿನಿಯು ಇನ್ನು ಮೇಲೆ ಅಲ್ಲಿಯೇ ಊಟ ಮಾಡತಕ್ಕವಳು.

ಮಾಲತಿ--ಅವರಲ್ಲಿ ಹೆಂಗಸರು ಇರುವರೇನು?

ಪಾರ್ವತಿ--ಹೆಂಗಸರು ಮಾತ್ರ ಇದ್ದಂತೆ ತೋರಲಿಲ್ಲ. ಆದರೆ ಆ ಮನುಷ್ಯನು ಬಹು ಒಳ್ಳೆಯವನಿರುತ್ತಾನೆ, ಆತನ ಮನೆಯಲ್ಲಿ ಕಾದಂಬಿನಿಯನ್ನು ಇಡಲಿಕ್ಕೆ ಯಾವ ಸಂಶಯವೂ ಇಲ್ಲ.

ಬಳಿಕ ಎಲ್ಲ ಜನರ ಒಪ್ಪಿಗೆಯಿಂದ ಕಾದಂಬಿನಿಯನ್ನು ಬಾಬಾಸಾಹೇಬನ ಮನೆಯಲ್ಲಿಡುವ ನಿಶ್ಚಯವಾಯಿತು. ಮರುದಿನ ದೊಡ್ಡ ನಸುಕಿನಲ್ಲಿ ಕಾದಂಬಿನಿಯನ್ನು ಸಂಗಡ ಕರಕೊಂಡು ಪಾರ್ವತಿಯು ಬಾಬಾಸಾಹೇಬನ ಮನೆಗೆ ಹೋದಳು. ಆಗ ಆತನು ತನ್ನ ದಿವಾಣಖಾನೆಯಲ್ಲಿ ಕುಳಿತುಕೊಂಡಿದ್ದನು ಒಬ್ಬ ಸೇವಕನು ವರದಿಯನ್ನು ಮುಟ್ಟಿಸಲು ಬಾಬಾಸಾಹೇಬನು ಅವರನ್ನು ಒಳಗೆ ಬಿಡ ಹೇಳಿದನು. ಕಾಲುಗಳು ಘಾಳಿಯಾದ್ದರಿಂದ ಪಾರ್ವತಿಯೂ ಕಾದಂಬಿನಿಯೂ ದಿವಾಣಖಾನೆಯ ಬಾಗಿಲಬಳಿಯಲ್ಲಿಯೇ ನಿಂತುಕೊಂಡರು. ಆಗ ಬಾಬಾಸಾಹೇಬನು ಕಾದಂಬಿನಿಯನ್ನು ದಿಟ್ಟಿಸಿ ನೋಡಿ ಒಳಗೆ ಬರಲಿಕ್ಕೆ ತಿಳಿಸಿದನು ಅದಕ್ಕೆ ಪಾರ್ವತಿಯು—ಧನಿಯರೇ, ನಮ್ಮ

ಕಾಲುಗಳು ಧೂಳ ಆಗಿವೆ!!

ಬಾಬಾಸಾಹೇಬ—ಧೂಳ ಆದರೆ ಏನಾಯಿತು? ಒಳಗೆ ಬರಬಹುದು. ಕಡೆಗೆ ಅವರಿಬ್ಬರೂ ಒಳಗೆ ಹೋದರು. ಕಾದಂಬಿನಿಯ ದೃಷ್ಟಿಯು ಕೆಳಕ್ಕೇ ಇತ್ತು; ಅವಳ ಎದೆಯು ಧಡ ಧಡ ಹಾರುತ್ತಿತ್ತು.

ಪಾರ್ವತಿಯು—ಒಡೆಯರೇ; ಈಕೆಯು ಯಾವ ಕೆಲಸವನ್ನು ಮಾಡಬೇಕು? ಎಂಬದನ್ನು ಹೇಳಿದರೆ ನಾನು ಇವಳಿಗೆ ಚನ್ನಾಗಿ ತಿಳಿಸಿಕೊಡುವೆನು.

ಬಾಬಾಸಾಹೇಬ—ಕೆಲಸದ ಚಿಂತೆಯು ನಿಮಗೆ ಬೇಡ; ನಾನು ನಿಮಗಿಂತಲೂ ಹೆಚ್ಚು ಆಸ್ಥೆಯಿಂದ ಆಕೆಗೆ ತಿಳಿಸುವೆನು. ಇನ್ನು ನೀವು ಮನೆಗೆ ಹೋಗಿರಿ. ನನ್ನ ಕೆಲಸ ಬಿದ್ದಾಗ ನಾನು ಈಕೆಯಿಂದ ಮಾಡಿಸಿಕೊಳ್ಳುವೆನು.

ಬಾಬಾಸಾಹೇಬನ ಈ ಮಾತುಗಳನ್ನು ಕೇಳಿ ಪಾರ್ವತಿಯು ಕಾದಂಬಿನಿಯು ಕಡೆಗೆ ಹೊರಳಿ—ಮಗಳೆ, ನಾನು ಹೋಗುವೆನು. ಸಾಯಂಕಾಲದಲ್ಲಿ ಕರೆಯಬರುವೆನು. ಎಂದು ನುಡಿದು ಕೂಡಲೇ ಬಾಬಾಸಾಹೇಬನನ್ನುದ್ದೇಶಿಸಿ—ಒಡೆಯರೇ, ಹುಡುಗೆಯು ಚಿಕ್ಕವಳಿರುವಳು. ಈಕೆಯ ಮೇಲೆ ತಮ್ಮ ಕೃಪೆಯಿರಬೇಕು. ಎಂದು ಅನ್ನುತ್ತಿರಲು ಅವಳ ಕಣ್ಣೊಳಗಿಂದ ಅಶ್ರುಗಳು ಟಪಟಪನೆ ಉದುರಿದವು. ಆಗ ಬಾಬಾಸಾಹೇಬನು ಸ್ಮಿತಮುಖದಿಂದ ಕಾದಂಬಿನಿಯನ್ನು ನೋಡುತ್ತ ೫ ರೂಪಾಯಿಗಳನ್ನೂ ಒಂದು ಗರ್ಭರೇಶ್ಮಿಯ ಶೀರೆಯನ್ನೂ ಪಾರ್ವತಿಯ ಕೈಯಲ್ಲಿ ಕೊಟ್ಟು—ಇದು ಈಕೆಯ ಒಂದು ತಿಂಗಳ ಪಗಾರ; ಎಂದು ಅಂದನು. ಕೈಯಲ್ಲಿ ರೂಪಾಯಿ ಹಾಗು ಶೀರೆಯು ಬೀಳಲು ಪಾರ್ವತಿಯು ಕಣ್ಣು ಒರಿಸಿಕೊಳ್ಳುತ್ತ ಮೌನದಿಂದ ಮನೆಯ ಕಡೆಗೆ ತೆರಳಿದಳು.

ಪಾರ್ವತಿಯು ಹೋದ ಬಳಿಕ ಬಾಬಾಸಾಹೇಬನು ವರ್ತಮಾನಪತ್ರಗಳನ್ನು ಓದುವದರಲ್ಲಿ ಮಗ್ನನಾದನು. ಪಾಪ! ಕಾದಂಬಿನಿಯು ಬಹಳ ಹೊತ್ತಿನ ವರೆಗೆ ಸುಮ್ಮನೆ ನಿಂತುಕೊಂಡಳು. ಆಕೆಗೆ ಬಾಬಾಸಾಹೇಬನನ್ನೂ ಆ ಕೋಣೆಯೊಳಗಿನ ಚೇರಿ ಸುಂದರ ಒಡವೆಗಳನ್ನೂ ನೋಡುವದರ ಹೊರತು ಅನ್ಯಕೆಲಸವಿರಲಿಲ್ಲ. ಆಕೆಗೆ ಬೇಸರವಿಟ್ಟಿತು. ಅವಳು ಸ್ವಲ್ಪ ಧೈರ್ಯದಿಂದ—

ಕಾದಂಬಿನಿ—"ನಾನು ಇಲ್ಲಿ ಯಾವ ಕೆಲಸವನ್ನು ಮಾಡಬೇಕು"

ಬಾಬಾ—(ಮೇಲಕ್ಕೆ ನೋಡಿಯ ನ್ಹೆತ್ತಿ) ಇತ್ತ ಬಾ, ಈ ಖುರ್ಚಿಯ ಮೇಲೆ ಕುಳಿತು ಟೇಬಲ್ಲಿನ ಮೇಲೆ ಅಸ್ತವ್ಯಸ್ತವಾಗಿ ಬಿದ್ದ ಈ ಕಾಗದಗಳನ್ನು ಚನ್ನಾಗಿ ಜೋಡಿಸಿ ಇಡು ನೋಡೋಣ;

ಅದನ್ನು ಕೇಳಿ ಕಾದಂಬಿನಿಯು ಟೇಬಲ್ಲಿನ ಬಳಿಯಲ್ಲಿ ಎದ್ದು ನಿಂತು ಕಾಗದಗಳನ್ನು ಜೋಡಿಸತೊಡಗಿದಳು. ಆಕೆಯಲ್ಲಿದ್ದ ಅಂಜಿಕೆ ಹಾಗು ಸಂಕೋಚ ಭಾವವು ನಷ್ಟವಾಗಬೇಕೆಂದು ಬಾಬಾಸಾಹೇಬನು ಆಕೆಗೆ ನಡುನಡುವೆ ಕೆಲವು ಪ್ರಶ್ನೆಗಳನ್ನು ಮಾಡುತ್ತಿದ್ದನು ಆಕೆಯ ಬಾಯಿಂದ ಅವರ ಮನೆತನದ ಎಲ್ಲ ಸಂಗತಿಯನ್ನು ಕೇಳಿ ಅವನಿಗೆ ಬಹಳ ವಿಷಾದನಾಯಿತು. ಆಗ ಆತನು—

ಬಾಬಾಸಾಹೇಬ- "ಈಗಾದರೂ ನಿಮ್ಮ ಅಕ್ಕ ಹಾಗು ಅತ್ತಿಗೆಯುವರು ಹೆಣೆಯುವ ಕೆಲಸ ಮಾಡುತ್ತಿರುವರೇನು?"

ಕಾದಂಬಿನಿ—"ಇಲ್ಲ, ಕೈಯಲ್ಲಿ ದುಡ್ಡೇ ಇಲ್ಲ, ಹೆಣೆಯುವ ಕೆಲಸವು ಹ್ಯಾಗೆ ನಡೆಯುಬೇಕು?"

ಬಾಬಾಸಾಹೇಬ—ಒಳ್ಳೇದು, ನಾನು ಉಣ್ಣೆಯ ನೂಲನ್ನು ತರಿಸಿಕೊಟ್ಟರೆ, ನನ್ನ ಸಲುವಾಗಿ ಏನಾದರೂ ಹೆಣಿಸಿಕೊಂಡು ಬರುವಿಯಾ?

ಕಾದಂಬಿನಿಯು—ಅವಶ್ಯವಾಗಿ ಹೆಣಿಸಿಕೊಂಡು ಬರುವೆನು.

ಬಾಬಾಸಾಹೇಬ—ನಿನಗೆ ಹೆಣೆಯುವ ಕೆಲಸ ಬರುವದೇನು?

ಕಾದಂಬಿನಿ -ಅಲ್ಪ ಸ್ವಲ್ಪ ಬರುತ್ತದೆ.

ಬಾಬಾಸಾಹೇಬ – ನಿನಗೆ ಓದುಬರಹ ಬರುತ್ತದೇನು?

ಕಾದಂಬಿನಿ—ಬರುತ್ತದೆ; ನಾಲ್ಕನೆಯ ಇಯತ್ತೆಯ ವರೆಗೆ ಇಂಗ್ಲಿಷನ್ನು ಓದಿರುವೆನು.

ಬಾಬಾ—ಹಾಗಾದರೆ ಈ ವಾಕ್ಯವನ್ನು ಓದುನೋಡೋಣ!

ಕಾದಂಬಿನಿ—(ಓದತೊಡಗಿದಳು) "Tell me what is your intention."

ಬಾಬಾಸಾಹೇಬ—ಶಾಬಾಸ್! ನಿನಗೆ ಚನ್ನಾಗಿ ಓದಲಿಕ್ಕೆ ಬರುತ್ತದೆ! ನಾನು ನಿನ್ನ ಜಾತಿಯವನಿರುವೆನು ಈಗ ಹತ್ತು ಬಡಿಯಿತು. ಒಳಗೆ ಅಡಿಗೆಯಾಗಿದೆ; ಈ ದಿನ ನೀನೇ ನನಗೆ ಉಣ್ಣಬಡಿಸು.

ಕಾದಂಬಿನಿ—(ಆಶ್ಚರ್ಯದಿಂದ) ನಿಜವಾಗಿಯೇ ನೀವು ನಮ್ಮ ಜಾತಿಯವರೇನು?

ಬಾಬಾ—ನಿಜವಾಗಿಯೂ ನಾನು ನಿನ್ನ ಜಾತಿಯವನು. ನನ್ನ ಮಾತಿನಲ್ಲಿ ನಿನ್ನ ವಿಶ್ವಾಸವಿಲ್ಲದಿದ್ದರೆ ನಾನು ಮುಟ್ಟಿದ ಅನ್ನ ವನ್ನು ನೀನು ಉಣ್ಣಬೇಡ; ನನಗೆ ಮಾತ್ರ ನೀನೇ ಬಡಿಸಬೇಕು.

ಬಳಿಕ ಕಾದಂಬಿನಿಯು ಅಡಿಗೆಯ ಮನೆಗೆ ಹೋಗಿ ಬಾಬಾ ಸಾಹೇಬನಿಗೆ ಊಟಕ್ಕೆ ಬಡಿಸಿದಳು ಆ ಚಪಲೆಯು ವ್ಯವಸ್ಥೆ ಯಿಂದಬಡಿಸುವದನ್ನು ನೋಡಿ ಆತನು ಬಹು ಆನಂದಪಟ್ಟನು. ಅಂದು ಆತನಿಗೆ ಆ ಕೋಮಲೆಯ ಕೈಯೊಳಗಿನ ಅನ್ನವು ಬಲು ರುಚಿ ಹತ್ತಿತು. ಆತನ ಊಟವಾದ ಬಳಿಕ ಆತನ ವಿಶೇಷಾಗ್ರಹ ದಿಂದ ಕಾದಂಬಿನಿಯೂ ಊಟ ಮಾಡಿದಳು

ಸಂಜೆಯಾದ ಬಳಿಕ ಪಾರ್ವತಿಯು ಕರೆಯ ಬಂದಳು. ಕಾದಂಬಿನಿಯು ಬಾಬಾಸಾಹೇಬನು ಕೊಟ್ಟ ಉಣ್ಣೆಯ ಲಡಿಗಳನ್ನು ತಕ್ಕೊಂಡು ಮನೆಗೆ ಹೋದಳು. ಆಕೆಗೆ ಆ ದಿವಸ ಪರಮಾನಂದ ವಾಗಿತ್ತು. ತನಗೆ ಚಲೋ ಮನೆಯು ಸಿಕ್ಕಿತೆಂದು ಅವಳು ಉಬ್ಬುಬ್ಬಿ ತನ್ನ ಅಕ್ಕನ ಮುಂದೆ ಹೇಳಿದಳು. ರಾತ್ರಿಯಲ್ಲಿ ಪೂರ್ಣ ಜಾಗರಣ ಮಾಡಿ ಸುಲೋಚನೆ ಮಾಲತಿಯರು ಬಾಬಾಸಾಹೇಬನು ಕಳಿಸಿದ ಉಣ್ಣೆಯಿಂದ ಸುಂದರವಾದ ಗುಲಾಬಿಯ ಹೂಗಳನ್ನು ಸಿದ್ಧಪಡಿಸಿದರು. ಮರುದಿನ ಕಾದಂಬಿನಿಯು ಆ ಹೂಗಳನ್ನು ತಂದು ಕೊಡಲು ಬಾಬಾಸಾಹೇಬನು ಸಂತೋಷಪಟ್ಟನು. ಅವನು ಕಾದಂಬಿನಿಯ ಕೈಯಲ್ಲಿ ಹತ್ತು ರೂಪಾಯಿಗಳನ್ನು ಕೊಟ್ಟು "ಇವನ್ನು ನಿಮ್ಮ ಮನೆಯಲ್ಲಿ ಕೊಡು" ಎಂದು ಹೇಳಿದನು. ಕಾದಂಬಿನಿಯು ಸಂಜೆಗೆ ಪುನಃ ಮನೆಗೆ ಹೋದ ಬಳಿಕ ಆ ರೂಪಾಯಿಗಳನ್ನು ಸುಲೋಚನೆಯ ಕೈಯಲ್ಲಿ ಕೊಟ್ಟಳು. ಅದರೆ ಸುವಿಚಾರಿಯಾದ ಸುಲೋಚನೆಯು ಆ ಹತ್ತು ರೂಪಾಯಿಗಳಲ್ಲಿ ಒಂದನ್ನು ಮಾತ್ರ ಇಟ್ಟುಕೊಂಡು ಉಳಿದವುಗಳನ್ನು ತಿರುಗಿ ಕಳಿಸಿದಳು. ಸುಲೋಚನೆಯು ರೂಪಾಯಿಗಳನ್ನು ತಿರುಗಿ ಕಳಿಸುವಾಗ ಹೇಳಿಕಳಿಸಿದ "ಉಣ್ಣೆಯು ನಿಮ್ಮದಿದ್ದು ನಮ್ಮ ಶ್ರಮಕ್ಕಾಗಿ ೧೦ ರೂಪಾಯಿಗಳನ್ನು ತಕ್ಕೊಳ್ಳುವದು ನಮಗೆ ಉಚಿತವಲ್ಲ. ನಿಮಗೆ ಸಿಟ್ಟು ಬರಬಾರದೆಂದು ಒಂದು ರೂಪಾಯಿಮಾತ್ರ ಇಟ್ಟುಕೊಂಡಿರುತ್ತೇನೆ" ಎಂಬ ಮಾತುಗಳನ್ನು ಕೇಳಿ—ಬಾಬಾಸಾಹೇಬನು ನಕ್ಕು—ನಿಮ್ಮ ಅಕ್ಕನಿಗೆ ನಾನು ರೂಪಾಯಿ ಕಳಿಸಿದ್ದರ ರಹಸ್ಯವು ಮೋಳೆಯುಲಿಲ್ಲವೆಂದು ನುಡಿದು ರೂಪಾಯಿಗಳನ್ನು ಕಿಸೆಯಲ್ಲಿ ಹಾಕಿಕೊಂಡನು.

---

[ 10 ]

ಬರಬರುತ್ತ ಕಾದಂಬಿನಿಯ ಮೇಲೆ ಹಾಗು ಆಕೆಯ ಕುಟುಂಬದವರ ಮೇಲೆ ಬಾಬಾಸಾಹೇಬನ ಪ್ರೇಮವು ಬೆಳೆಯುತ್ತ ನಡೆಯಿತು. ಅವನು ಆ ದುಃಖಿತ ಕುಟುಂಬದವರಿಗೆ ಗುಪ್ತವಾಗಿ ಸಹಾಯ ಮಾಡತೊಡಗಿದನು. ದಿನಾಲು ಒಬ್ಬ ಮನುಷ್ಯನು ಸುಲೋಚನೆಯೇ ಮೊದಲಾದವರಿದ್ದ ಮನೆಗೆ ಬಂದು ಅವರ ಕಣ್ಣು ತಪ್ಪಿಸಿ ಅಕ್ಕಿ ಬೇಳೆ ಮೊದಲಾದ ಸಾಮಗ್ರಿಗಳನ್ನು ಸುರುವಿ ಹೋಗುತ್ತಿದ್ದನು. ಹೀಗೆ ಸಾಮಗ್ರಿಗಳನ್ನು ತರುವವನು ಯಾರು? ಅವನನ್ನು ಯಾರು ಕಳಿಸುವರು? ಎಂಬ ಸಂಗತಿಗಳು ತಿಳಿಯದ್ದರಿಂದ ಆ ಹೆಂಗಸರು ಬಹಳ ಗೊಂದಲದಲ್ಲಿ ಬಿದ್ದರು; ಅವರ ಕಲ್ಪನೆಗೆ ಹಾಗೂ ಶೋಧಕ್ಕೆ ಅದು ಬಗಿಹರಿಯದ್ದರಿಂದ ಅವರು ನಿರುಪಾಯರಾಗಿ, ಅನಾಥರಾದ ತಮಗೆ ದೇವರೇ ಸಹಾಯ ಮಾಡುತ್ತಿರುವನೆಂದು ನಂಬಿ ಸುಮ್ಮನಾದರು.

ಬಾಬಾಸಾಹೇಬನ ಈ ಉಪಕಾರ್ಯದಿಂದ ಸುಲೋಚನೆ-ಮಾಲತಿಯರ ಉಪವಾಸ-ವನವಾಸಗಳು ತಪ್ಪಿದಂತಾದವು; ಅವರು ಹೊಟ್ಟೆತುಂಬ ಉಣ್ಣಹತ್ತಿದರು ಆದರೂ ಸುಲೋಚನೆಯ ಸರದಾಸ್ಯವು ಇನ್ನೂ ತಪ್ಪಿದ್ದಿಲ್ಲ. ಹೀಗಿರಲು ಒಂದು ದಿನ ಶ್ರೀಪತಿಯ ಮನೆಗೆ ಕಮಲನಾಭನು ಬಂದನು. ಇವರಿಬ್ಬರು ಗೆಳಸ್ಯ-ಕಂಠಸ್ಯಗೆಳೆಯರೆಂಬದು ನಮ್ಮ ವಾಚಕರ ಸ್ಮರಣೆಯಲ್ಲಿರಬಹುದು; ಅದರಂತೆ ಅವರು ರಾಮಕೋಟೆಯಲ್ಲಿ ಒಂದು ದಿನ ಕಿಡಿಕಿಯಲ್ಲಿ ಸುಲೋಚನೆಯ ಸುಂದರ ಮುಖವನ್ನು ನೋಡಿ ಆಕೆಯ ವಿಷಯವಾಗಿ ಆಡಿದ ಮಾತುಗಳೂ ನೆನಪಿನಲ್ಲಿರಬಹುದು ಆ ಪ್ರಕಾರ ಅವರ ಕಾರ್ಯವು ಸಾಧಿಸುತ್ತ ಬಂದದ್ದರಿಂದ ಈಗ ಶ್ರೀಪತಿಯ ಬಳಿಗೆ ಕಮಲನಾಭನು ಆ ಮಹಾ ಕಾರ್ಯವನ್ನು ಸಾಂಗಗೊಳಿಸುವದ

ಕ್ಕಾಗಿ ಬಂದಿದ್ದನು ಬಲೆಯಲ್ಲಿ ಸಿಕ್ಕ ಎರಳೆಯಂತೆ ತಮ್ಮ ಮನೆಯ ಲ್ಲಿರುವ ಸುಲೋಚನೆಯನ್ನು ಅವನು ಮನದಣಿಯಾಗಿ ನೋಡಿ ಬಹು ಸಂತೋಷಬಟ್ಟು—ಮಿತ್ರಾ, ನೀನು ನಿಜವಾಗಿಯೂ ಧನ್ಯನು? ನಿನಗೆ ಈ ಸುಂದರಿಯ ಸಾನ್ನಿಧ್ಯವು ಸಿಕ್ಕು ಬಹಳ ದಿವಸ ಗಳಾದವು, ಆದರೆ...........ಎಂದು ನುಡಿಯಲು

ಶ್ರೀಪತಿ—ಆದರೆ ಏನು?

ಕಮಲನಾಭ—ಮಿತ್ರಾ, ನಿನಗೆ ಇನ್ನೇನು ಹೇಳಬೇಕು? ಮುಖ್ಯ ಮಾತೇ ನಿನಗೆ ಸಾಧಿಸಿದಂತೆ ತೋರುವದಿಲ್ಲವಲ್ಲ?

ಶ್ರೀಪತಿ—ಗೆಳೆಯಾ, ನೀನು ಬಲು ಧೂರ್ತನು; ನಾನು ಆ ಸಂಗತಿಯನ್ನು ಹೇಳದಿದ್ದರೂ ನೀನು ಅದನ್ನು ಧೋರಣದಿಂದ ತಿಳಿದುಕೊಂ ; ಆದರೆ ಅದು ಶುದ್ಧ ಮಹಿಷಿಯು; ಅದಕ್ಕೆ ಜ್ಞಾನವೇ ಇಲ್ಲ; ನಾನು ಅವಳ ಸಂಗಡ ಬಹಳ ಪ್ರೇಮದಿಂದ ನಡ ಕೊಳ್ಳುವೆನು; ಬೇಕಾದದ್ದನ್ನು ತಿನಿಸುವೆನು; ಉಣಿಸುವೆನು. ಚಲೋಚಲೋ ಸೀರೆ-ಕುಪ್ಪಸಗಳನ್ನು ಕೊಡುವೆನು. ಬೇಕಾದಷ್ಟು ಸಲಿಗೆಯನ್ನು ತೋರಿಸುವೆನು; ಅಂಗವಿಕ್ಷೇಪಗಳನ್ನು ಮಾಡು ವೆನು. ಏನು ಮಾಡಿದರೂ ವ್ಯರ್ಥವು.

ಕಮಲನಾಭ - ಸರಿ! ಸರಿ! ಅಂತೂ ಸೋತೆಯಷ್ಟೇ?

ಶ್ರೀಪತಿ---ಸೋಲಲಿಕ್ಕೇನು? ಪ್ರಯತ್ನವು ನಡೆದೇ ಇರುವದು.

ಕಮಲನಾಭ —ಛೀ; ಸಾಕು ಬಿಡು; ನನ್ನ ಮುಂದೆ ವೃಥಾ ಪೌರುಷವನ್ನು ಹೇಳಬೇಡ; ಕೈಗೆ ಸಿಕ್ಕ ಒಬ್ಬ ವಿಧವೆಯನ್ನು......

ಶ್ರೀಪತಿ—ಬಲಾತ್ಕಾರದಿಂದ ಆಗತಕ್ಕಷ್ಟು ಪ್ರಯೋಜನ ವಾಗುವದಿಲ್ಲ.

ಕಮಲನಾಭ—ತಿಳಿದ ಹಾಗಾಯಿತು ನಿನ್ನ ಸ್ವರೂಪವು?

ಆದಕ್ಕೇಕೆ ಇಷ್ಟು ತಡ; ನಾನು ನಾಲ್ಕೆಂಟು ದಿವಸಗಳಲ್ಲಿ ಬೇಕಾದ ಹಾಗೆ ಕಾರ್ಯ ಸಾಧಿಸುವನು ನೋಡು; ನಂತರ ನಿನಗೆ ಮಹಾ ಪ್ರಸಾದವು ಸಿಕ್ಕೇಸಿಗುವದು

ಈ ರೀತಿಯಾಗಿ ಅವರಿಬ್ಬರ ಸಂಭಾಷಣವಾದ ಬಳಿಕ ಮಹಾ ನೀಚನಾದ ಕಮಲನಾಭನು ಸುಲೋಚನೆಯನ್ನು ಮರುಳುಮಾಡುವ ಪ್ರಯತ್ನ ನಡಿಸಿದನು. ತಾನು ಪರಕೀಯಳೆಂಬ ಭಾವನೆಯು ಆಕೆಯಲ್ಲಿ ಹುಟ್ಟಬಾರದೆಂದು ಆ ದುಷ್ಟನು ಶ್ರೀಪತಿಗೆ ಅಪ್ಪಣೆಯಿತ್ತನು. ಆ ವಾರಾಂಗನೆಗೆ ಅತ್ತಿಗೆಯೆಂದೇ ಕರೆಯಹತ್ತಿದನು, ಪಾಪ! ಸರಳಮನಸ್ಸಿನ ಸುಲೋಚನೆಯು ಕಮಲನಾಭನನ್ನು ಶ್ರೀಪತಿಯ ತಮ್ಮನೆಂದು ತಿಳಿದಳು ಒಂದು ದಿನ ಮುಂಜಾನೆಯಲ್ಲಿ ಸುಲೋಚನೆಯು ಮನೆಯಮುಂದಿನ ತೋಟದಲ್ಲಿ ಹೂಗಳನ್ನು ಎತ್ತುತ್ತಿದ್ದಳು. ಆಳು ಗಳು ಬೇರೊಂದು ಕಡೆಯಲ್ಲಿ ಕೆಲಸಮಾಡುತ್ತಿದ್ದರು. ಸುಲೋಚ ನೆಯು ಹೊರತು ಅಲ್ಲಿ ಯಾರೂ ಇದ್ದಿಲ್ಲ ಈ ಸಂಧಿಯನ್ನು ಸಾಧಿಸಿ ಕಮಲನಾಭನು ಆಕೆಯ ಬಳಿಗೆ ಹೋದನು. ಆಗ ಸುಲೋಚನೆಯು ಗಾಬರಿಯಾಗಿ ಸೆರಗನ್ನು ಸಾವರಿಸಿಕೊಳ್ಳುತ್ತ ಬೇರೆ ಕಡೆಗೆ ಹೋಗು ವದಕ್ಕಾಗಿ ಉದ್ಯುಕ್ತಳಾಗಲು. ಅಷ್ಟರಲ್ಲಿ ಕಮಲನಾಭನು ಮುಂದ ರಿದು 'ಸುಲೋಚನೆ' ಎಂದು ಒದರಿದನು ಆ ಹೆಸರನ್ನು ಕೇಳಿ, ಆಕೆಯು ಬೆಚ್ಚಿಬಿದ್ದಳು; ಯಾಕಂದರೆ, ಶ್ರೀಪತಿಯ ಮನೆಯಲ್ಲಿ ಆಕೆಯು ತನ್ನ ಹೆಸರು 'ಗಿರಿಜೆ' ಎಂದು ಹೇಳಿದ್ದಳು; ಆದ್ದರಿಂದ ಈ ಅಜ್ಞಾತವಾಸದಲ್ಲಿ ತನ್ನನ್ನು ಕಂಡು ಹಿಡಿದದ್ದಕ್ಕಾಗಿ ಆಕೆಗೆ ವಿಸ್ಮಯ ವಾದದ್ದು ಆಶ್ಚರ್ಯವಲ್ಲ ಅವಳು ಲಜ್ಜೆಯಿಂದ ಮೋರೆ ಕೆಳಗೆಮಾಡಿ ಕೊಂಡು ನಿಲ್ಲಲು, ಕಮಲನಾಭನು ಅರ್ಧ ಕೆಲಸವಾಯಿತೆಂದು ತಿಳಿದು—"ಸುಲೋಚನೇ, ಗಾಬರಿಯಾಗಬೇಡ; ನಾನು ನಿನ್ನ ಸಹಜವಾದ ಈ ಹೆಸರನ್ನು ಯಾವ ಮುಂದೂ ಹೇಳುವದಿಲ್ಲ. ನಿನ್ನ

ಮನೆತನವು ಈ ಪರಿ ಹೀನಸ್ಥಿತಿಗೆ ಬಂದದ್ದನ್ನು ನೋಡಿ ನನಗೆ ಅತ್ಯಂತ ವ್ಯಸನವಾಗುತ್ತದೆ. ಯಾಕಂದರೆ ನನ್ನ ತಂದೆಯೂ, ನಿನ್ನ ತಂದೆಯೂ ಕೂಡಿ ಕೆಲಸ ಮಾಡುತ್ತಿದ್ದರು; ಒಬ್ಬರಿಗೊಬ್ಬರು ಪರಮ ಸ್ನೇಹಿತರು; ನಾನು ನಿಮ್ಮೆಲ್ಲರನ್ನು ಪೂರ್ಣವಾಗಿ ಬಲ್ಲೆನು. ಆದ್ದರಿಂದ ನಿಮ್ಮ ವಿಷಯವಾಗಿ ನಾನಷ್ಟು ಕನಿಕರ ಪಡುತ್ತೇನೆ ಸುಲೋಚನಾ, ಇನ್ನು ಸ್ವಲ್ಪ ದಿವಸಗಳಲ್ಲಿ ನಿಮ್ಮ ಕಷ್ಟವೇ ಪರಿಹಾರವಾಗುವದು. ನಿಮ್ಮ ವಾಸುದೇವರಾಯನು ಎಲ್ಲಿರುವನೆಂಬ ದನ್ನು ನಾನು ಗೊತ್ತು ಹಚ್ಚುತ್ತೇನೆ" ಎಂದು ಬಣ್ಣದ ಮಾತುಗಳ ನ್ನಾಡಿದನು. ಆತನ ಕನಿಕರಭಾವವನ್ನು ತಿಳಿದು ಆಕೆಯು ನಿಜ ವಾಗಿಯೂ ಕಮಲನಾಭನು ದೊಡ್ಡ ಮನುಷ್ಯನೆಂದು ನಂಬಿದಳು. ಆಗ ಅವಳಲ್ಲಿ ದುಃಖವು ಒತ್ತರಿಸಿ ಬಂದದ್ದರಿಂದ ಅವಳು ಸುಮ್ಮನೆ ಕಣ್ಣೀರುದುರಿಸುತ್ತ ನಿಂತು ಬಿಟ್ಟಳು. ಬಳಿಕ ಕಮಲನಾಭನು ಆಕೆ ಯನ್ನು ಸಮಾಧಾನ ಪಡಿಸುತ್ತ ನುಡಿದನೇನೆಂದರೆ--"ಸುಲೋಚನಾ, ಶೋಕಮಾಡಬೇಡ; ನಾನು ನಿಮ್ಮ ವಾಸುದೇವರಾಯ ನನ್ನು ನಿಶ್ಚಯವಾಗಿ ಗೊತ್ತು ಹಚ್ಚುವೆನು. ನೀನು ಇಲ್ಲಿ ನಿಂತು ಬಹಳ ಹೊತ್ತಾಯಿತು ಈಗಿನ ಜನರು ಬಲು ಕೆಟ್ಟವರು; ಏನಾ ದರೊಂದು ಅಪಶಬ್ದವನ್ನು ಹೊರಿಸುತ್ತಾರೆ; ನಾನು ಸುಂದರನೂ, ತರುಣನೂ ಮೇಲಾಗಿ ಶ್ರೀಮಂತನೂ ಇರುವೆನು ನೀನೂ ಸುಂದ ರಿಯೂ, ತರುಣಿಯೂ ಇರುತ್ತೀ; ಮೇಲಾಗಿ ಈಗ ನಿನಗೆ ದಾರಿ ದ್ರ್ಯವು ಪ್ರಾಪ್ತವಾಗಿದೆ. ಇಂಥ ಸ್ಥಿತಿಯಲ್ಲಿ ನಾನೂ ನೀನೂ ಮಾತಾಡುತ್ತ ನಿಂತದ್ದನ್ನು ಯಾರಾದರೂ ಕಂಡರೆ, ನಿನ್ನ ಮೇಲೆ ವೃಥಾ ಆರೋಪವನ್ನು ಹೊರಿಸಿಯಾರು, ನಿನ್ನಂಥ ಸುಶೀಲಳನ್ನು ಹೀಗೆ ಲೋಕಾಪವಾದಕ್ಕೆ ಗುರಿಮಾಡಲಾರೆನು ಆದ್ದರಿಂದ ಈಗ ನೀನು ಹೋಗು; ನಾಳೆ [illegible]

ತಿಳಿದ ಹಾಗೆ ನಿನಗೆ ಹೇಳುತ್ತ ಹೋಗುವೆನು. ನಾನು ಸನ್ನೆ ಮಾಡಿದ ಕೂಡಲೆ ನನಗೆ ಭೆಟ್ಟಿಯಾಗಲಿಕ್ಕೆ ತಪ್ಪಬೇಡ?"

ಪ್ರಿಯವಾಚಕರೇ, ಸ್ತ್ರೀಯರು ಎಷ್ಟು ಚತುರರಿದ್ದರೂ ಸ್ವಾಭಾವಿಕವಾದ ಮರುಳುತನವು ಅವರನ್ನು ಬಿಟ್ಟು ಹೋಗುವದಿಲ್ಲ. ಸುಲೋಚನೆಯು ಚಾಣಾಕ್ಷಳಿದ್ದರೂ ಕಮಲನಾಭನ ಕಪಟ ಮಾತುಗಳನ್ನು ನಿಜವೆಂದು ತಿಳಿದಳು. ಅವಳು ಆತನು ಬಹು ಸಂಭಾವಿತನೆಂದು ಭಾವಿಸಿ ಕೃತಜ್ಞತೆಯಿಂದ ಆತನನ್ನು ನೋಡಿದಳು. ಆಗ ಆ ಕುಟಿಲನು ಮನದಲ್ಲಿಯೇ ಹಿಗ್ಗುತ್ತ ತತ್ಕ್ಷಣದಲ್ಲಿ ಅಲ್ಲಿಂದ ಜಾರಿದನು ಸುಲೋಚನೆಯು ಪೂರ್ವವತ ಹೂಗಳನ್ನು ಹರಿಯ ತೊಡಗಿದಳು. ಬಳಿಕ ಒಂದೆರಡು ದಿನಗಳು ಕ್ರಮಿಸಲು ಕಮಲನಾಭನು ವಾಸುದೇವರಾಯನ ಸಂಬಂಧವಾಗಿ ಸುಲೋಚನೆಯ ಮುಂದೆ ಏನೇನೋ ಹೇಳಿದನು. ಅದರಿಂದ ಆ ಸಾಧ್ವಿಗೆ ಸಂತೋಷವಾಯಿತು. ಅವಳು ಆತನ ಮೇಲೆ ಹೆಚ್ಚು ವಿಶ್ವಾಸವನ್ನಿಟ್ಟು ಆತನು ಸನ್ನೆಮಾಡಿದಾಗೆಲ್ಲ ಅವನ ಬಳಿಗೆ ಹೋಗಿ ಏಕಾಂತದಲ್ಲಿ ಅವನನ್ನು ಕಂಡು ಬರುತ್ತಿದ್ದಳು

ಹೀಗೆ ನಾಲ್ಕೈದು ಸಾರೆ ಸುಲೋಚನೆಯು ಕಮಲನಾಭನಿಗೆ ಭೆಟ್ಟಿಯಾದಳು. ಪ್ರತಿಯೊಂದು ಸಾರೆ ಏನಾದರೊಂದು ಸುಳ್ಳು ಸುದ್ದಿಯನ್ನು ಹೇಳಿ ಆ ನೀಚನು ಆಕೆಯನ್ನು ಸಂತೋಷಪಡಿಸುತ್ತಿದ್ದನು. ನಿರ್ವಿಕಾರ ಸ್ಥಿತಿಯ ಹಾಗು ಪಾಪಬುದ್ಧಿಯಿಲ್ಲದ ಸುಲೋಚನೆಯು ತನ್ನ ಅಣ್ಣನಾದ ವಾಸುದೇವನ ಶುಭವರ್ತಮಾನಗಳಲ್ಲಿ ಮಗ್ನಳಾಗಿ ಕಮಲನಾಭನು ತನ್ನ ವಿಷಯವಾಗಿ ತಾಳಿದ ಪಾಪ ವಿಚಾರವನ್ನು ತಿಳಿಯಲಸಮರ್ಥಳಾದಳು ಕಡೆಗೊಂದು ದಿನ ಆ ಕುಲಾಂಗಾರನು ಆ ಅಂಗನೆಯನ್ನು ಕುರಿತು—"ಈ ದಿನ ಮೂರು ತಾಸು ರಾತ್ರಿಯ ಸುಮಾರಕ್ಕೆ ನೀನು ನಮ್ಮ ತೋಟಕ್ಕೆ ಬಾ, ಈ

ದಿನ ವಾಸುದೇವರಾಯನ ಭೆಟ್ಟಿಯ ಸುಯೋಗವು ನಿನಗೆ ಲಭಿಸುವದು. ನಿನ್ನನ್ನು ಕರೆಯಲಿಕ್ಕೂ ಕಳಿಸಲಿಕ್ಕೂ ನಮ್ಮ ಮನುಷ್ಯನು ಬರುವನು'' ಎಂದು ನುಡಿದನು. ಆನ್ನಾನ ಹುಚ್ಚು ಹತ್ತಿ ಹೋಗಿದ್ದ ಸುಲೋಚನೆಯು ಅವನ ಮಾತಿಗೆ ಒಪ್ಪಿಕೊಂಡಳು. ಸ್ವಲ್ಪ ದಿವಸಗಳ ಹಿಂದೆ ಒಟಿಕನು ಕೈ ತೋರಿಸಿದ್ದು ಆಕೆಯ ಧ್ಯಾನದಲ್ಲಿ ಉಳಿಯಲಿಲ್ಲ. ಬರಲಿಕ್ಕೆ ಕಾರಣವೂ ಇದ್ದಿಲ್ಲ. ಯಾಕೆಂದರೆ ಕಮಲನಾಭನು ತನ್ನ ಸದ್ವರ್ತನಗಳಿಂದ ಆಕೆಯ ಪೂರ್ಣವಿಶ್ವಾಸಕ್ಕೆ ಪಾತ್ರನಾಗಿದ್ದನು.

ಹೊತ್ತು ಮುಣುಗಿತು; ಸುಲೋಚನೆಯು ತನ್ನ ಕೆಲಸವನ್ನು ಮುಗಿಸಿಕೊಂಡು ಲಗಬಗೆಯಿಂದ ಮನೆಗೆ ಹೋಗಿ ಊಟತೀರಿಸಿದಳು ಮತ್ತು ಪಾರ್ವತಿ ಮಾಲತಿಯರಿಗೆ ತಾನು ಕಮಲನಾಭನ ಕಡೆಗೆ ಹೋಗಬೇಕಾಗಿರುವ ಮಹತ್ವದ ಕಾರಣವನ್ನು ತಿಳಿಸಿದಳು. ದಿನಾಲು ಸುಲೋಚನೆಯ ಬಾಯಿಂದ ಕಮಲನಾಭ-ಪ್ರೇಮಲಯರ ವರ್ಣನವನ್ನು ಕೇಳುತ್ತಿದ್ದದರಿಂದ ಆ ಸ್ತ್ರೀಯರು ಆ ಪುರುಷಾಧಮರನ್ನು ಸಂಭಾವಿತರೆಂತಲೇ ಭಾವಿಸಿದ್ದರು. ಅವರಿಗೂ ವಿಕಲ್ಪಗಳು ಹುಟ್ಟಲಿಲ್ಲ. ಅಷ್ಟರಲ್ಲಿ ಪಟ್ಟಣದ ಚಾವಡಿಯಲ್ಲಿ – ಒಡೆಯಿತು. ಕಮಲನಾಭನ ಮನುಷ್ಯನು ಬಂದನು. ಯಾವಸಂಶಯವೂ ಇಲ್ಲದರಿಂದ ಸಂಗಡ ಪಾರ್ವತಿಯನ್ನು ಸಹ ಕರಕೊಳ್ಳದೆ ಒಬ್ಬಳೇ ಆ ಮನುಷ್ಯನ ಸಂಗಡ ಹೊರಟಳು. ಆ ಮನುಷ್ಯನು ನೆಟ್ಟಗೆ ತೋಟವನ್ನು ಸೇರಿ ಕಮಲನಾಭನು ಹೇಳಿದ ಸ್ಥಳಕ್ಕೆ ಆಕೆಯನ್ನು ಕರೆದೊಯ್ದನು. ಅಲ್ಲಿ ಸುಂದರವಾದದ್ದೊಂದು ಮಂದಿರವಿತ್ತು. ಮನುಷ್ಯನು ಹೊರಗೆ ನಿಂತನು. ಸುಲೋಚನೆಯು ಒಳಗೆ ಹೋದಳು. ಆಗ ಆಕೆಯ ಕಣ್ಣಿಗೆ ಒಂದು ವಿಚಿತ್ರನೋಟವು ಬಿತ್ತು.

ಸುಲೋಚನೆಯು ಕಾಲಿಟ್ಟ ಕೋಣೆಯು ಬಲು ಮನೋಹರ

ವಾಗಿ ಶೃಂಗರಿಸಲ್ಪಟ್ಟಿತ್ತು; ಶ್ರೀಕೃಷ್ಣನ ರಾಸಕ್ರೀಡೆಯು ಹಾಗು ಬೇರೆ ಶೃಂಗಾರ ಕೇಳಿಯ ಭವ್ಯವಾದ ಪಟಗಳು ಕಮಲನಾಭನ ಇಚ್ಛೆಯ ದ್ಯೋತಕಗಳಾಗಿ ತೋರುತ್ತಿದ್ದವು. ಶುಭ್ರವಾದ ಸೂಕ್ಷ್ಮ ವಸ್ತ್ರದಿಂದ ಆಚ್ಛಾದಿಸಲ್ಪಟ್ಟ ಪಲ್ಲಂಗವು ಗ್ಯಾಸಲಾಯಿಟಿನಲ್ಲಿ ಅಂದವಾಗಿ ತೋರುತ್ತಿತ್ತು. ಇದನ್ನೆಲ್ಲವನ್ನೂ ಕೋಣೆಯಲ್ಲಿ ವಾಸುದೇವರಾಯನಿರದೆ, ಕಮಲನಾಭನು ಒಬ್ಬನೇ ಇದ್ದದ್ದನ್ನೂ ಕಂಡು ಸುಶೀಲೆಯು ಸೋಂಡೆಯೊಣಗಿತು; ಅವಳ ಕೈಕಾಲುಗಳು ತಣ್ಣಗಾದವು; ಅಷ್ಟರಲ್ಲಿ ಕಮಲನಾಭನು ಎದ್ದು ಬಂದು ಕೋಣೆಯ ಬಾಗಿಲಿಕ್ಕಿ ಚಿಲಕ ಹಾಕಲು ಅವಳು ಮತ್ತಷ್ಟು ಎದೆಯೊಡೆದಳು. ಇನ್ನು ತನ್ನ ಸತೀಧರ್ಮವು ಭ್ರಷ್ಟವಾಗುವದೆಂದು ಅವಳಿಗೆ ನಿಶ್ಚಯವಾಗಿ ಗೊತ್ತಾಯಿತು, ಪಾಪ! ಅನಾಥ ಸ್ತ್ರೀಯು ಮಾಡುತ್ತಾಳೇನು? ಸ್ವಲ್ಪ ದಿವಸಗಳ ಕೆಳಗೆ ಬಟುಕನ ಕೈಯೊಳಗಿಂದ ಪಾರಾಗಿ ಹೋದ ಹಾಗೆ ಈ ದಿನ ಹೋಗುವ ಹಾಗಿದ್ದಿಲ್ಲ. ಸುತ್ತಲೂ ಪಹರೆಯು; ಇನ್ನು ಏನು ಹಂಚಿಕೆ ಮಾಡಬೇಕೆಂದು ಅವಳು ಯೋಚಿಸುತ್ತಿರಲು, ಕಮಲನಾಭನು ಆಕೆಯ ಕಾಲುಗಳ ಮೇಲೆ ಬಿದ್ದು—ಸುಂದರೀ, ನಾನು ನಿನ್ನ ದಾಸನು; ನಿನ್ನ ಆಲಿಂಗನದ ಸಲುವಾಗಿ ನನ್ನ ಜೀವವು ತಳಮಳಗೊಳ್ಳುತ್ತದೆ; ಆದ್ದರಿಂದ ನಿನ್ನ ಪ್ರಾಪ್ತಿಗಾಗಿ ನಾನಿಷ್ಟು ಕಪಟಜಾಲವನ್ನು ಒಡ್ಡಿದೆನು. ವಾಸುದೇವರಾಯನ ಸಂಬಂಧವಾಗಿ ನಿನಗೆ ಹೇಳಿದ ಸಂಗತಿಗಳೆಲ್ಲ ಅಕ್ಷರಶಃ ಸುಳ್ಳಿರುತ್ತವೆ. ಆದರೆ ನಿನಗೆ ಹೇಳಿಕೊಳ್ಳುವದಿಷ್ಟೇ; ನಾನು ನಿನ್ನ ದಾಸನಾಗಿ ನಡಕೊಳ್ಳುವೆನು. ನನ್ನ ಆ ಲಕ್ಷಾಂತರ ಆಸ್ತಿಯ ಒಡತಿಯು ನೀನಾಗುವಿ? ಪರರ ಶಾಗಿರ್ದಿಯನ್ನು ಮಾಡಿ ಹೊಟ್ಟೆ ಹೊರಕೊಳ್ಳುವದಕ್ಕಿಂತ ನನ್ನ ಪ್ರೇಮಕ್ಕೆ ಪಾತ್ರಳಾದ ನೀನು ಐಶ್ವರ್ಯವನ್ನು ಭೋಗಿಸುವದು ಉಚಿತವಲ್ಲವೇ? ನಿನ್ನ

ಪುಣ್ಯದಿಂದ ನಿಮ್ಮ ಕುಟುಂಬದಲ್ಲಿಯು ಎಲ್ಲ ಸ್ತ್ರೀಯರೂ ಸುಖಪ ಟ್ಟಾರು! ಯಾಕೆ ಸುಂದರೀ, ಮಾತಾಡು; ನನ್ನ ಇಚ್ಛೆಯನ್ನು ಪೂರ್ಣ ಮಾಡುವೆಯಾ? ಎಂದು ಮಾತಾಡಿದನು. ಅದನ್ನು ಕೇಳಿ ಸುಲೋಚನೆಯು ಧೂರ್ತತನದಿಂದ ವಿಕಟಹಾಸ್ಯಮಾಡಿ ನುಡಿದಳೇ ನಂದರೆ—"ರಾಯರೇ ಹೀಗೇನು? ಈ ಮಾತಿಗಾಗಿ ಯಾಕೆ ಇಷ್ಟು ಹೇಳಿಕೊಳ್ಳುವಿರಿ? ಈ ಮೊದಲೇ ನೀವು ಸ್ವಲ್ಪ ಸೂಕ್ಷ್ಮವಾಗಿ ನಿಮ್ಮ ಈ ಮನೋಭಿಪ್ರಾಯವನ್ನು ನನಗೆ ತಿಳಿಸಿಬಿಟ್ಟದ್ದರೆ ನಿಮ್ಮ ಕೆಲಸವು ಯಾವಾಗಲೋ ಆಗಿ ಹೋಗುತ್ತಿತ್ತಲ್ಲ? ನಿಮ್ಮಂಥ ಶ್ರೀ-ಮಂತ ತರುಣರ ಪ್ರೀತಿಗೆ ಪಾತ್ರಳಾದ ನಾನು ನಿಜವಾಗಿಯೂ ಧನ್ಯ ಳೆಂದು ತಿಳಿಯುತ್ತೇನೆ.

ಸುಲೋಚನೆಯ ಈ ಬಗೆಯ ಮಾತುಗಳಿಂದ ಕಮಲನಾ ಭನು ಬಾಯಿತೆರೆದನು. ಅವನಿಗೆ ಸ್ವರ್ಗವು ಮೂರೇ ಬೆರಳು ಉಳಿ ದಂತೆ ತೋರಿತು, ಅವನು ಆ ಆನಂದದ ಭರದಲ್ಲಿ—"ಪ್ರಿಯೇ, ಇತ್ತ ಬಾ, ಈ ಪಲ್ಲಂಗದ ಮೇಲೆ ಕುಳಿತುಕೋ ನಾನು ದಡ್ಡತನ ಮಾಡಿ ಸುಮ್ಮನೆ ಇಷ್ಟುದಿನ ನಿನ್ನ ಸುಖಕ್ಕೆರವಾದೆನು. ಆದ ಮಾತಿಗೆ ಚಿಂತಿಸಿ ಫಲವಿಲ್ಲ ಈ ದಿನ ನನ್ನನ್ನು ಆಲಿಂಗಿಸಿ, ನನಗಾದ ತಾಪವನ್ನು ನಿವಾರಿಸು. ಎಂದನು ಅದಕ್ಕೆ—

ಸುಲೋಚನೆ-- ರಾಯರೇ ನಿಮ್ಮ ಮಾತು ಕೇಳಿ ನನಗೆ ಬಹಳ ಸಂತೋಷವಾಗುತ್ತದೆ. ಆದರೆ............

ಕಮಲನಾಭ—ಆದರೆ ಯಾಕೆ?

ಸುಲೋಚನೆ—ಈ ದಿನ ನಾನು............

ಕಮಲನಾಭ—ಹೀಗೇನು? ಈ ದಿನವಿಲ್ಲದಿದ್ದರೆ ನಾಳೆಯಾ ಗಲಿ; ಸುಂದರೀ ನಿನ್ನಿಂದ ಇಷ್ಟು ಸುಂದರ ಮಾತುಗಳು ಹೊರಟಾ ವೆಂಬ ಕಲ್ಪನೆಯು ಕೂಡಾ ನನ್ನಲ್ಲಿದ್ದಿಲ್ಲ. ಬಲಾತ್ಕಾರದಿಂದ ನನ್ನ

ಕಾರ್ಯವನ್ನು ಸಾಧಿಸಿಕೊಳ್ಳಬೇಕೆಂದು ಮಾಡಿದ್ದನು.

ಸುಲೋಚನೆ—(ಮುಗುಳುನಗೆನಕ್ಕು) ಈಗ ಇಲ್ಲಿ ನನ್ನದೇನು ಕೆಲಸವಿದೆ, ಮನೆಗೆ ಹೋಗಲಾ?

ಆ ಸುಂದರಿಯ ಈ ಮೋಹಕ ಭಾಷಣದಿಂದ ಕಮಲನಾಭ ನಲ್ಲಿ ಸ್ವಲ್ಪ ಭ್ರಾಂತಿಯುಂಟಾಯಿತು. ತನ್ನ ಕಪಟಮಂತ್ರವು ತನಗೇ ತಿರುಗಿತೆಂಬ ಎಚ್ಚರವುಳಿಯಲಿಲ್ಲ. ಅವನು ಸಂತೋಷದಿಂದ ಸುಲೋಚನೆಯನ್ನು ಕುರಿತು—ಈಗ ನೀನು ಮನೆಗೆ ಹೋಗಬಹುದು. ನಾಳೆಗೆ ಸುಸ್ನಾತಳಾಗಿ ಇದೇ ವೇಳೆಗೆ ಬಂದು ನನಗೆ ಆನಂದವನ್ನುಂಟು ಮಾಡಬೇಕು ಎಂದು ನುಡಿದನು. ಅವನು 'ಹೋಗು' ಎಂದು ನುಡಿದದ್ದೊಂದೇ ತಡ; ಸುಲೋಚನೆಯು ಬಾಗಿಲವನ್ನು ತೆರೆದು ಬೆದರಿದ ಎರಳೆಯಂತೆ ಮನೆಯ ಕಡೆಗೆ ಓಡಿದಳು. ಆಗ ರಾತ್ರಿಯು ಸುಮಾರು ಂಗಗೆಂಟೆಯಾಗಿರಬಹುದು; ಸುತ್ತಲೂ ಕಗ್ಗತ್ತಲೆಯು ಕವಿದಿತ್ತು; ಅಂಥಹೊತ್ತಿನಲ್ಲಿ ಆ ಸಾಧ್ವಿಯು ಜೀವದ ಪರವೆಯಿಲ್ಲದೆ ಮನೆಗೆ ಬಂದು ಬಿದ್ದಳು. ಅವಳ ಮೈಯು ಥರಥರ ನಡುಗುತ್ತಿತ್ತು; ಮಾತಾಡುವದಕ್ಕೆ ನಾಲಿಗೆಯು ಚಲಿಸಲೊಲ್ಲದು; ಮನೆಯವರೆಲ್ಲರೂ ನಿದ್ದೆಗಣ್ಣಿನಲ್ಲಿದ್ದದರಿಂದ ಆಕೆಯ ಈ ದುರವಸ್ಥೆಯು ಯಾರ ಲಕ್ಷ್ಯದಲ್ಲಿಯೂ ಬರಲಿಲ್ಲ. ಆಕೆಯೂ ಹೇಳಲಿಲ್ಲ.

ರಾತ್ರಿಯಲ್ಲಿ ಸುಲೋಚನೆಗೆ ಭಯಂಕರವಾದ ಜ್ವರಬಂದಿತು; ಆಕೆಯು ತನ್ನ ದುರವಸ್ಥೆಯ ವಿಷಯವಾಗಿ ಬಹಳ ದುಃಖಿಸಿದಳು. ಮರುದಿನ ಬೆಳಗಾದ ಮೇಲೆ ಪಾರ್ವತಿಯು ಸುಲೋಚನೆಯ ಮೈ ಹಿಡಿದು ನೋಡಿದಳು; ಜ್ವರಬಹಳಿದ್ದಿತು; ಆಗ ಸಹ ಸುಲೋಚನೆಯು ಆ ರಾಕ್ಷಸನ ಅತ್ಯಾಚಾರವನ್ನು ಹೇಳಲಿಲ್ಲ; ಎರಡು ತಾಸು ಹೊತ್ತು ಏರಿತು; ಸುಲೋಚನೆಗೆ ಜ್ವರಬಂದ ಸುದ್ದಿಯನ್ನು ಕೇಳಿ ಬಾಬಾನಾಹೇಬನು ಕಾದಂಬಿನಿಗೆ ಒಂದೆರಡು ದಿನಗಳ ರಜೆಯನ್ನು ಕೊಟ್ಟು

ಆಕೆಯನ್ನು ಅಕ್ಕನ ಶುಶ್ರೂಷಣೆಗಾಗಿ ಮನೆಗೆ ಕಳಿಸಿಕೊಟ್ಟನು. ಬಾಬಾಸಾಹೇಬನ ಈ ಔದಾರ್ಯವನ್ನು ನೋಡಿ ಸೌಮಿತ್ರಿಯು ಸಂತೋಷಪಟ್ಟು ಮನಸ್ಸಿನಲ್ಲಿ ಆಲೋಚಿಸಿದಳೇನೆಂದರೆ—"ಎಲ್ಲರೂ ಬಾಬಾಸಾಹೇಬನಂಥ ದೊಡ್ಡ ಮನಸ್ಸಿನ ಮನುಷ್ಯರಿರುತ್ತಾರೆಂಬ ನಿಯಮವಿಲ್ಲ; ಸುಲೋಚನೆಯು ಜ್ವರಬಂದು ಮಲಗಿದ್ದರಿಂದ ಆಕೆಯು ದುಡಿಯಲಿಕ್ಕೆ ಬಾರದೆ ಇದ್ದುದನ್ನು ಯಜಮಾನರು ಹೇಗೆ ಸ್ವೀಕರಿಸುವರೋ ತಿಳಿಯದು; ಕದಾಚಿತ್ ಅವರಿಗೆ ಸಿಟ್ಟುಬಂದು ಆಕೆಯನ್ನು ನೌಕರಿಯಿಂದ ದೂರ ಮಾಡಿದರೂ ಮಾಡಬಹುದು. ಮುಂದೆ ನಮ್ಮ ಹೊಟ್ಟೆಯ ಗತಿ ಏನು? ಇಷ್ಟು ಅನರ್ಥ ಮಾಡಿಕೊಳ್ಳುವದಕ್ಕಿಂತ ಅಕ್ಕನಿಗೆ ಗುಣವಾಗುವವರೆಗೆ ನಾನೇ ಅವರ ಮನೆಯಲ್ಲಿ ದುಡಿಯಲಿಕ್ಕೆ ಹೋಗುವದು ಉಚಿತವು."

ಈ ಮೇರೆಗೆ ಸೌಮಿತ್ರಿಯು ಆಲೋಚಿಸಿ ಬಡತನದ ಕಿಚ್ಚಿಗೆ ಶ್ರೀಪತಿಯಮನೆಗೆ ಹೋದಳು. ಮೊಟ್ಟಮೊದಲು ತೋಟದಲ್ಲಿಯೇ ಶ್ರೀಪತಿಯು ಆಕೆಗೆ ಭೆಟ್ಟಿಯಾದನು. ಸೌಮಿತ್ರಿಯು ಆತನನ್ನು ಕುರಿತು ವಿನಯದಿಂದ—"ರಾಯರೇ, ಈ ದಿನ ನಮ್ಮಕ್ಕನು ಜ್ವರ ಬಂದು ಮಲಗಿರುವಳು; ಆಕೆಯ ಬದಲು ನಾನು ದುಡಿಯಲಿಕ್ಕೆ ಬರುತ್ತೇನೆ," ಎಂದಳು. ಆಕೆಯ ಈ ಮಾತಿಗೆ (ಸ್ವಲ್ಪ ದರ್ಪದಿಂದ) "ಛೀ; ನಾನು ಹೀಗೆ ಒಮ್ಮೆಲೆ ರಜೆಕೊಡುವದಿಲ್ಲ; ಆಕೆಯೇ ಬರಲಿಕ್ಕೆ ಬೇಕು," ಎಂದು ಶ್ರೀಪತಿಯು ನುಡಿಯಲು, ಪಾಪ! ಆ ಹೆಣ್ಣುಮಗಳು ಸಣ್ಣ ಮೋರೆಮಾಡಿಕೊಂಡು ನೆಲನೋಡುತ್ತ ನಿಂತುಕೊಂಡಳು. ಆಗ ಆ ನೀಚನು ಸ್ವಲ್ಪ ದಯತೋರಿಸಿದಂತೆ ನಟಿಸುತ್ತ—"ನಿಮ್ಮ ಅಕ್ಕನಿಗೆ ನೆಟ್ಟಗಾಗುವ ವರೆಗೆ ನೀನು ನಮ್ಮಲ್ಲಿ ದುಡಿಯಬಹುದು; ಆದರೆ ನೀನು ಹಗಲೆಲ್ಲ ನಿಮ್ಮ ಮನೆಯಲ್ಲಿಯೇ ಇದ್ದುಕೊಂಡು ನಿಮ್ಮ ಅಕ್ಕನ ಶುಶ್ರೂಷೆಯನ್ನು ಮಾಡು; ಸಂಜೆಯು

೬ ಗಂಟೆಯಾದ ಬಳಿಕ ನಮ್ಮಲ್ಲಿಗೆ ಬಂದು ಸಂಜೆಯ ಉಪಾಹಾರಸಿದ್ಧಗೊಳಿಸಿ, ತಿರುಗಿ ನಿಮ್ಮ ಮನೆಗೆ ಹೋಗು,'' ಎಂದು ಅಂದನು. ಸಾತ್ವಿಕಳಾದ ಸೌಮಿತ್ರಿಯು ಅದಕ್ಕೆ ಒಪ್ಪಿಕೊಂಡು ಮನೆಗೆ ಹೋದಳು.

―――

[ 11 ]

ಕೃಷ್ಣಪಕ್ಷದ ರಾತ್ರಿಯು; ಗಾಢಾಂಧಕಾರವು ಧರಿತ್ರಿಯನ್ನೆಲ್ಲ ಮುಚ್ಚಿಹಾಕಿದೆ; ರಸ್ತೆಯಲ್ಲಿ ನಿಲ್ಲಿಸಲ್ಪಟ್ಟ ಕಂದೀಲುಗಳು ಅಲ್ಲಿಯೊಂದು ಇಲ್ಲಿಯೊಂದು ಮಿಣುಗುಡುತ್ತಲಿವೆ ಓಡಾಡುವ ಜನರ ಭರವು ತಗ್ಗುತ್ತಲಿವೆ ಇಂಥ ಹೊತ್ತಿನಲ್ಲಿ ಶ್ರೀರಂಗಪಟ್ಟಣದ ಈಶಾನ್ಯ ಮೂಲೆಯಲ್ಲಿರುವ ಒಂದು ಹೂದೋಟದೊಳಗಿಂದ ಒಮ್ಮಿಂದೊಮ್ಮೆ ಆರ್ತಸ್ವರವು ಕೇಳಿಸಿತು. ಆ ಸ್ವರದ ಮೇಲಿಂದ ಯಾವಳೋ ಒಬ್ಬ ಸ್ತ್ರೀಯಳು ಭಯಂಕರವಾದ ವಿಪತ್ತಿಗೆ ಗುರಿಯಾಗಿರಬೇಕೆಂದು ಅದನ್ನು ಕೇಳಿದವರು ತಟ್ಟನೆ ಊಹಿಸಬಹುದಾಗಿತ್ತು.

ಈ ಸಮಯದಲ್ಲಿ ಒಬ್ಬ ತರುಣನು ಆ ಹೂದೋಟವನ್ನು ಪ್ರವೇಶಿಸುವ ಹವಣಿಕೆಯಲ್ಲಿದ್ದನು. ಅಕಸ್ಮಾತ್ತಾಗಿ ಅವನ ಕಿವಿಗಳಿಗೆ ಮೇಲಿನ ಆರ್ತಸ್ವರವು ಬೀಳಲು, ದನಿಯು ಗುರ್ತನದಾದ್ದರಿಂದ ಅವನ ಎದೆಯೂ ಧಸ್ಸೆಂದಿತು. ಮತ್ತೊಮ್ಮೆ ಕೇಳಬೇಕೆಂದರೆ ಆ ಸ್ವರವು ಒಂದು ಸಾರೆಗೇ ಗುಪ್ತವಾಯಿತು. ಆಗ ಆ ತರುಣನು ಆಶ್ಚರ್ಯಪಟ್ಟು ಆದಷ್ಟು ಬೇಗ ತೋಟವನ್ನು ಪ್ರವೇಶಿಸುವ ಪ್ರಯತ್ನ ನಡಿಸಿದನು. ಅವನು ಆ ತೋಟದ ಬಾಗಿಲವನ್ನು ಹುಡುಕುತ್ತಿರಲು, ಸುದೈವದಿಂದ ಅದು ಅವನಿಗೆ ಬೇಗ ಸಿಕ್ಕಿತು. ಆದರೆ ಬಾಗಿಲ ಬಳಿಯಲ್ಲಿದ್ದ ಕಾವಲುಗಾರನು ಅವನನ್ನು ಒಳಗೆ ಬಿಡದಾದನು. ತರುಣನು ಉತಾವಳಿ ಸ್ವಭಾವದವನಾದ್ದರಿಂದ ಕಾವಲುಗಾರನನ್ನು ಸದೆಬಡಿದು ನಿರ್ಭಯದಿಂದ ಒಳಗೆ ಸೇರಿದನು.

ಆ ತೋಟದ ಒಂದು ಮೂಲೆಯಲ್ಲಿ ಅವನಿಗೆ ಒಂದು ಮಂದಿರವು ಕಾಣಿಸಿತು. ಅವನು ನೆಟ್ಟಗೆ ಅದರ ಕಡೆಗೆ ಸಾಗಿ, ಬಾಗಿಲವನ್ನು ದೂಡಿದನು. ಕರ್ಮಧರ್ಮಸಂಯೋಗದಿಂದ ಬಾಗಿಲಕ್ಕೆ ಒಳಚಿಲಕ ಹಾಕದ್ದರಿಂದ ಅದು ಸಹಜವಾಗಿ ಇಬ್ಭಾಗವಾಯಿತು ಶಿವ! ಶಿವ!! ಒಳಗೆ ನಡೆದ ಪ್ರಕಾರವನ್ನು ಕಣ್ಣಿನಿಂದ ನೋಡಲಾಸಲ್ಲ; ಕಿವಿಯಿಂದ ಕೇಳಲಾಸಲ್ಲ; ಲೆಕ್ಕಣಿಕೆಯಿಂದ ವರ್ಣಿಸಲಾಸಲ್ಲ!!!

ಒಳಗೆ ಇಬ್ಬರು ನರಾಧಮರಿದ್ದು, ಒಬ್ಬ ನವಯುವತಿಯ ಅಲ್ಲಲ್ಲ-ಪ್ರೌಢಬಾಲಿಕೆಯ ಮಾನಭಂಗಮಾಡುವ ಸಾಹಸದಲ್ಲಿದ್ದರು. ಅವರು ಆ ಕೋಮಲೆಯನ್ನು ನೆಲಕ್ಕೆಕೆಡವಿದ್ದು, ಅವಳ ಸೀರೆಯನ್ನು ಚಂಡುಮಾಡಿ ಅವಳ ಬಾಯಲ್ಲಿ ತುರುಕಿದ್ದರು; ನಗ್ನಾವಸ್ಥೆಯಲ್ಲಿದ್ದ ಆ ಮುಗ್ಧೆಯು ಪರಾಧೀನಳಾಗಿ ಉರುಳಾಡುತ್ತಿದ್ದಳು. ಅವಳನ್ನು ಒಬ್ಬನು ಗಟ್ಟಿಯಾಗಿ ಹಿಡಿದಿದ್ದನು; ಇನ್ನೊಂದು ಕ್ಷಣ ಅವಕಾಶವು ಸಿಕ್ಕಿದ್ದರೆ ಆ ಬಾಲಿಕೆಯ ಸರ್ವಸ್ವವು ಸೂರೆಯಾಗುತ್ತಿತ್ತು. ಅಷ್ಟರಲ್ಲಿ ಮೇಲೆ ಹೇಳಿದ ತರುಣನು ಒಳನುಗ್ಗಿ ಆ ನರಾಧಮರನ್ನು ತನ್ನ ಅಗಾಧವಾದ ಸಾಮರ್ಥ್ಯದಿಂದ ನ್ಯೆಮುರಿ ಥಳಿಸಿದನು. ಆತನ ಪೆಟ್ಟುಗಳಿಂದ ಆ ನೀಚರು ಕಳವಳಗೊಂಡು ಬಾಲಿಕೆಯನ್ನು ಬಿಡಲು ಅವಳು ಕೊಡವಿಕೊಂಡೆದ್ದು ಅತ್ಯಂತ ಲಜ್ಜೆಯಿಂದ ಸೀರೆಯನ್ನು ಉಟ್ಟುಕೊಳ್ಳಲಾರಂಭಿಸಿದಳು. ಆ ಆಗಂತುಕ ತರುಣನು ಅವಳನ್ನು ದಿಟ್ಟಿಸಿ ನೋಡುತ್ತಿರಲು, ಆ ನೀಚರಿಬ್ಬರು ಸಂತಾಪದಿಂದ ಅವನ ಮೇಲೇರಿ ಬಂದರು ಆದರೆ ಆ ತರುಣನು ಅಂಥ ಹತ್ತು ಮಂದಿಯನ್ನು ನೋಡಿಕೊಳ್ಳುವಷ್ಟು ಬಲಿಷ್ಠನಿದ್ದದರಿಂದ ಅವರು ಸುಮ್ಮನೆ ಕೈಯುಜ್ಜಿಕೊಳ್ಳುತ್ತ ನಿಲ್ಲಬೇಕಾಯಿತು.

ಆಗ ಆ ತರುಣನು ಬಾಲಿಕೆಯ ಗುತರ್ಹಿಡಿದು —“ ಯಾರು? ಪ್ರಿಯೇ, ನೀನು ಹ್ಯಾಗೆ ಈ ದುಷ್ಟರ ಕೈಯಲ್ಲಿ ಸಿಕ್ಕಿಕೊಂಡೆ?

ಹಾಯ್! ಹಾಯ್! ತುಸ ತಡವಾಗಿದ್ದರೆ ಎಂಥ ಅನರ್ಥವಾಗಿ ಹೋಗುತ್ತಿತ್ತಲ್ಲ!'' ಎಂದು ನುಡಿದು ಆ ತರುಣಿಯನ್ನು ಸಂತೈಸಿ—"ಇನ್ನು ನಿರ್ಭಯದಿಂದ ಮನೆಗೆ ನಡೆ; ಈ ನೀಚರನ್ನು ಯಮಪುರಿಗೆ ಕಳಿಸುವ ತ್ರಾಣವು ನನ್ನಲ್ಲಿರುವದು.'' ಎಂದು ಅಂದನು. ಆ ತರುಣನ ಮಾತು ಕೇಳಿ ಅತ್ಯಂತ ನಾಚಿಕೆಯಿಂದ ಆ ಸ್ತ್ರೀಯು [illegible] ಮನೆಯ ಹಾದಿ ಹಿಡಿದಳು

ಪ್ರಿಯ ವಾಚಕರೇ, ಹೀಗೆ ತರುಣಿಯನ್ನು ನೀಚರ ದವಡೆಯೊಳಗಿಂದ ಬಿಡಿಸಿದ ಪುಣ್ಯವಂತನು ಯಾವನು? ಆ ತರುಣಿಯು ಯಾರು? ಆ ನೀಚರು ಯಾರು? ಎಂಬದನ್ನು ತಿಳಿಯುವದಕ್ಕಾಗಿ ನಿಮ್ಮ ಮನಸ್ಸು ತವಕಿಸುತ್ತಿರಬಹುದಲ್ಲವೇ? ಹಿಂದಿನ ಪ್ರಕರಣದಲ್ಲಿ ಸೌಮಿತ್ರಿಯು ತನ್ನ ಅಕ್ಕನ ಬದಲು ಶ್ರೀಪತಿಯ ಮನಗೆ ಸಂಜೆಯ ೬ ಘಂಟೆಯ ಸಮಯಕ್ಕೆ ದುಡಿಯಲಿಕ್ಕೆ ಬರಲು ಒಪ್ಪಿಕೊಂಡ ಸಂಗತಿಯನ್ನು ಹೇಳಿದೆಯಷ್ಟೇ; ಸುಲೋಚನೆಯು ತಪ್ಪಿಸಿಕೊಂಡದ್ದರಿಂದ ಬುಭುಕ್ಷಿತರಾದ ನೀಚ ಕಮಲನಾಭ-ಶ್ರೀಪತಿಯರಿಬ್ಬರು ಸಂಜೆಗೆ ಸೌಮಿತ್ರಿಯು ಬರಲು, ಆಕೆಯ ಮೇಲೆ ಈ ರೀತಿಯಾಗಿ ಅತ್ಯಾಚಾರವನ್ನು ನಡಿಸಿದ್ದರು. ಆದರೆ ಆಯುತ ಸಮಯಕ್ಕೆ ಆ ತರುಣನು ಬರದಿದ್ದರೆ ಎಷ್ಟು ಘಾತವಾಗುತ್ತಿತ್ತೆಂಬದನ್ನು ಹೇಳಲವಶ್ಯವಿಲ್ಲ.

ಸೌಮಿತ್ರಿಯನ್ನು ಭೀಮರಾಯನು ಪ್ರೀತಿಸುತ್ತಿದ್ದು, ಅವಳನ್ನು ಲಗ್ನ ಮಾಡಿಕೊಳ್ಳಲಿಕ್ಕೆ ಇಚ್ಛಿಸುತ್ತಿದ್ದನೆಂಬದು ವಾಚಕರ ಸ್ಮರಣದಲ್ಲಿರಬಹುದು. ಅದರಂತೆ ಆತನು ಶಿವರಾಯನಿಗೆ ಶಿಕ್ಷೆಯಾಗಲು, ವಿಷಾದಪಟ್ಟು ವಾಸುದೇವರಾಯನಿಗೆ ಮುಟ್ಟಿಸಬೇಕೆಂದು ೧೦ಸಾವಿರ ರೂಪಾಯಿಗಳ ನೋಟುಗಳನ್ನು ಸೌಮಿತ್ರಿಯ ವಶಕ್ಕೆ ಕೊಟ್ಟು, ವಿಲಾಯತಿಗೆ ಹೊರಟುಹೋದ ಸಂಗತಿಯಾದರೂ ನೆನಪಿಗೆ ಬರಬಹುದು. ಆದರೆ ಅವನು ವಿಲಾಯತಿಗೆ ಹೋಗದೆ

ಮುಂಬೈಯಿಂದಲೇ ತನ್ನ ಊರ ಕಡೆಗೆ ತಿರುಗಿದನು. ಊರಿಗೆ ಬರುವಷ್ಟರಲ್ಲಿ ತಾಯಿಯು(ಕಾಳಿಂದಿಯು) ತೀರಿಕೊಂಡಿದ್ದಳು. ಹಿರಿಯ ಅಣ್ಣನಾದ ಮಾಧವನು ಮನೆಯಲ್ಲಿ ಸೇರಿಕೊಂಡಿದ್ದು ಚಂಚಲಾಕ್ಷಿಯ ಪ್ರಸ್ಥವು ಬೆಳೆದಿತ್ತು. ಆದ್ದರಿಂದ ಅವನು ಮನೆಯನ್ನು ಹೊಗದೆ ನಡುವಿನ ಅಣ್ಣನಾದ ಶ್ರೀಪತಿಯು ಎಲ್ಲಿರುವನೆಂಬದನ್ನು ಗೊತ್ತು ಹಚ್ಚಿ ಶ್ರೀರಂಗಪಟ್ಟಣಕ್ಕೆ ಬಂದಿದ್ದನು. ಆತನೇ ಈ ದಿನ ರಾತ್ರಿಯಲ್ಲಿ ಶ್ರೀಪತಿಯ ಭೆಟ್ಟಿಗಾಗಿ ಹೊರಟಿದ್ದು, ಮೇಲೆ ಹೇಳಿದಂತೆ ತನ್ನ ಭಾವೀಪತ್ನಿಯ ಮಾನಹಾನಿಯ ಸಮಯಕ್ಕೊದಗಿ ಅವಳ ಸತೀತ್ವವನ್ನು ಸಂರಕ್ಷಿಸಿದನು.

ಹೀಗೆ ಆಯಿತ ಸಮಯಕ್ಕೆ ತಮ್ಮ ಕೈಯೊಳಗೆ ಸಿಕ್ಕ ಬೇಟೆಯನ್ನು ಬಿಡಿಸಿದ್ದರಿಂದ ಶ್ರೀಪತಿ-ಕಮಲನಾಭರು ಹತಾಶರಾದರು. ಅವರು ಭೀಮರಾಯನನ್ನು ಕಟ್ಟಿಗಣ್ಣಿನಿಂದ ನೋಡುತ್ತಿರಲು ಅವನು ಮನಸ್ಸಿನಲ್ಲಿ-- "ನಾನು ಬಂದದ್ದು ಒಂದು ಕಾರ್ಯಕ್ಕೆ, ಆದದ್ದು ಮತ್ತೊಂದು ಕಾರ್ಯ; ಆದರೂ ಚಿಂತೆಯಿಲ್ಲ. ನನ್ನ ಪ್ರಿಯಳ ಮಾನಸಂರಕ್ಷಣೆಯಾಯಿತು," ಎಂದು ಯೋಚಿಸಿ ಆ ನೀಚರನ್ನು ತಿರುಗಿ ನೋಡದೆ ಸೌಮಿತ್ರಿಯೊಡನೆ ಅವಳ ಮನೆಗೆ ನಡೆದನು. [illegible] ರಿಗೆ ಹೇಳಿದಳು. ಮನೋರಮೆಯು [illegible] ಈ ಸಂಗತಿಯನ್ನು ಕೇಳಿಕೊಂಡು -- ಹರ! ಹರ! ಆ ರಾಕ್ಷಸರು ನನ್ನ ಮೇಲೆ ಮಾಡಿದ ಅತ್ಯಾಚಾರವನ್ನು ಆದಿನವೇ ನಾನು ಮನೆಯಲ್ಲಿ ಹೇಳಿದ್ದರೆ, ಸೌಮಿತ್ರಿಯು ಈ ಸಂಕಟಕ್ಕೆಲ್ಲಿ ಗುರಿಯಾಗುತ್ತಿದ್ದಳು? ಹಾಯ್! ಹಾಯ್! ದೇವಾ, ನಮ್ಮ ವಿಟಂಬನೆಯನ್ನು ಇನ್ನೂ ಎಲ್ಲಿಯವರೆಗೆ ನೋಡುತ್ತಿರುವೆ?" ಎಂದು ವ್ಯಾಕುಲಿತು ಗಟ್ಟಿಯಾಗಿ ಅಂದಳು. ಆ ಕಾಲಕ್ಕೆ ಅಲ್ಲಿಯೇ ನಿಂತುಕೊಂಡಿದ್ದ ಭೀಮರಾಯನು

ದೊಡ್ಡ ದನಿಯಿಂದ—"ಹ! ಭಯಪಡಬೇಡಿರಿ; ನಿಮ್ಮ ರಕ್ಷಣಕ್ಕಾಗಿಯೇ ದೇವರು ನನ್ನನ್ನು ಇಲ್ಲಿಗೆ ಕಳಿಸಿರುವನು. ಈ ಭೀಮರಾಯನು ಜೀವಂತನಿರುವವರೆಗೆ ಯಾವನೂ ನಿಮ್ಮ ಕೂದಲು ಸಹ ಕೊಂಕಗೊಡಲಾರನು." ಎಂದು ನುಡಿಯಲು, ಭೀಮರಾಯನ ದನಿ ಕೇಳಿ, ನಾಚಿ ಸುಲೋಚನೆಯು ಮುಸುಕು ಹಾಕಿಕೊಂಡಳು. ಬಳಿಕ ಸೌಮಿತ್ರಿಯು, ಭೀಮರಾಯನು ಹೋದಂದಿನಿಂದ ಇಲ್ಲಿಯವರೆಗೆ ತಾವು ಅನುಭವಿಸಿದ ಸಂಗತಿಗಳನ್ನು ಒಂದೂ ಉಳಿಸದಂತೆ ಅವನ ಮುಂದೆ ಹೇಳಿದಳು. ಅದನ್ನು ಕೇಳಿ ಭೀಮರಾಯನು ಬಹಳವಾಗಿ ಕಳವಳಗೊಂಡನು ತನ್ನ ಅಣ್ಣನಾದ ಶ್ರೀಪತಿಯ ನೀಚತನಕ್ಕಾದರೂ ಅವನಿಗೆ ಬಹಳ ವ್ಯಸನವಾಯಿತು.

* * * * *

ಭೀಮರಾಯನು ಅಕಸ್ಮಾತ್ತಾಗಿ ಅದೃಶ್ಯನಾಗಲು, ಕಾಲಿಂದಿಯು ದುಃಖಪಟ್ಟು ನಾಲ್ಕು ಕಡೆಗೂ ಹುಡುಕಿಸಿದಳು. ಆದರೆ ಅದು ವ್ಯರ್ಥವಾಯಿತು. ಬಳಿಕ ಆಕೆಯು ಮನೆಯ ಬಿಟ್ಟು ಹೋದ ಮಾಧವ-ಶ್ರೀಪತಿಯರನ್ನು ಕರೆದಳು. ಕೋರ್ಟಿನವರು ತನಗೆ ಕೊಡಿಸಿದ ಆಸ್ತಿಯ ಉಪಭೋಗವನ್ನು ತಕ್ಕೊಳ್ಳುತ್ತ ಶ್ರೀಪತಿಯು ತನ್ನ ಒಗರಿನಲ್ಲಿಯೇ ಇದ್ದನು. ಅವನು ತಾಯಿಯ ಆಮಂತ್ರಣವನ್ನು ಮಾನ್ಯಮಾಡಲಿಲ್ಲ; ಮಾಧವನು ಮಾತ್ರ ಮನೆಗೆ ಹೋದನು. ಆದರೆ ಚಂಚಲಾಕ್ಷಿಯು ಅತ್ತೆಯ ಕಡೆಗೆ ಹೊರಳಿ ಸಹ ನೋಡಲಿಲ್ಲ; ಇಂಥ ಸ್ಥಿತಿಯಲ್ಲಿ ಕಾಲಿಂದಿಯು ಅಸಹ್ಯವಾದ ದುಃಖದಿಂದ ಇಹಲೋಕಯಾತ್ರೆಯನ್ನು ಮುಗಿಸಿದಳು. ಕಾಲಿಂದಿಯ ಪಶ್ಚಾತ್ ಮಾಧವನು ತಮ್ಮ ಪಿತ್ರಾರ್ಜಿತ ಅಪಾರಸಂಪತ್ತಿಗೆ ಯಜಮಾನನಾಗಿ ಮನಬಂದಂತೆ ನಡೆಯತೊಡಗಿದನು. ಅವನ ಧರ್ಮಪತ್ನಿಯಾದ ಚಂಚಲಾಕ್ಷಿಯ ಇತಿಹಾಸವಂತೂ ನಮ್ಮ ವಾಚಕರ ಪರಿಚ

ಯದ ಸಂಗತಿಯೇ ಆಗಿರುವದು. ಇರಲಿ; ಮಾಧವನು ಸಂಪತ್ತಿನ ಸೊಕ್ಕಿನಿಂದ ವಾರಾಂಗನೆಯನ್ನು ಮನೆಯಲ್ಲಿಯೇ ತಂದಿರಿಸಿ ಹೆಂಡತಿಯನ್ನು ಪೂರ್ಣವಾಗಿ ದುರ್ಲಕ್ಷಿಸಿದನು. ಅದರಿಂದ ಆಕೆಗೆ ಶಂಭುವಿನ ಕೂಡ ಯಥೇಚ್ಛವಾಗಿ ವಿಹರಿಸಲಿಕ್ಕೆ ಅಸ್ಪದವು ಸಿಕ್ಕಿತು. ಬರಬರುತ್ತ ಮಾಧವನ ಆಯುಷ್ಯವೆಲ್ಲ ವಾರವನಿತೆಯ ಸಂಗದಲ್ಲಿ ವ್ಯಯವಾಗತೊಡಗಿತು. ಮದ್ಯಪಾನವು ಅವನ ಪ್ರೀತಿಯ ಕೆಲಸವಾಯಿತು. ಅವನ ಈ ದುರ್ವರ್ತನದ ಫಲವು ಅವನಿಗೆ ಬೇಗನೆ ಪ್ರಾಪ್ತವಾಯಿತು.

ಹೀಗಿರಲು ಶ್ರೀರಂಗಪಟ್ಟಣದಿಂದ ಹೊರಟ ಭೀಮರಾಯನು ರಾಮಕೋಟೆಯನ್ನು ಮುಟ್ಟಿ ತಮ್ಮ ಮನೆಗೆ ಹೋದನು. ಆಗ ಅಲ್ಲಿದ್ದ ಹಳೆಯ ಕಾವಲುಗಾರನೊಬ್ಬನು ಆತನ ಗುರ್ತ ಹಿಡಿದು ಎದ್ದು ನಿಂತು ಮುಜುರೆ ಮಾಡಿ—"ಒಡೆಯರೇ, ನಮ್ಮ ಧನೀಸಾಹೇಬರು ತಮ್ಮ ಅಪ್ಪಣೆಯ ಹೊರತು ಯಾರನ್ನೂ ಒಳಗೆ ಬಿಡಕೂಡದೆಂದು ಅಪ್ಪಣೆ ಮಾಡಿದ್ದಾರೆ! ಎಂದನು ಆಗ ಸಂತಪ್ತನಾದ ಭೀಮರಾಯನು—"ಏನು ನಮ್ಮ ಮನೆಯಲ್ಲಿ ಹೋಗಲಿಕ್ಕೆ ನನಗೆ ಪರವಾನಗಿಬೇಕೋ?"

ಕಾವಲುಗಾರ—ಹೌದು ಸರಕಾರ!

ಭೀಮರಾಯ—ಹೀಗೆ ಅಪ್ಪಣೆ ಮಾಡಿದವರು ಮಾಧವರಾಯರೇನು?

ಕಾವಲುಗಾರ—ರಾವಸಾಹೇಬ! ಮಾಧವರಾವಸಾಹೇಬರನ್ನು ಯಾರು ಕೇಳಬೇಕು? ಅವರು ಈಗೋ ಇನ್ನೊಂದು ತಾಸೋ ಎಂದು ದಿವಸ ಎಣಿಸಹತ್ತಿದ್ದಾರೆ.

ಭೀಮರಾಯ—ಹಾಗಾದರೆ ಮತ್ತೆ ಯಾರು?

ಕಾವಲುಗಾರ—ಶಂಭುರಾಯರು!

ಶಂಭುವಿನ ಹೆಸರು ಕೇಳಿದ ಕೂಡಲೆ ಭೀಮರಾಯನ ಪಿತ್ಥವು ತಲೆಗೇರಿತು. ಆತನು ತನಗೆ ಪ್ರತಿಬಂಧವಮಾಡುವ ಕಾವಲುಗಾರನನ್ನು ಚನ್ನಾಗಿ ಥಳಿಸಿ ಮನೆಯನ್ನು ಹೊಕ್ಕು ಉಪ್ಪರಿಗೆಯ ಮೇಲೆ ಹೋದನು. ಅಲ್ಲಿ ಶಂಭುವು ಗಾದಿಯ ಮೇಲೆ ದಿಂಬಿಗೆ ಆತು ಕುಳಿತಿದ್ದನು. ನಾಲ್ಕಾರು ಜನ ಕಾರಕೂನರು ಅವನ ಬಳಿಯಲ್ಲಿ ಕುಳಿತು ಲೆಕ್ಕ ಬರಿಯುತ್ತಿದ್ದರು ಅದನ್ನು ನೋಡಿದ ಬಳಿಕಂತೂ ಆತನ ಸಂತಾಪಾಗ್ನಿಯು ಹೆಚ್ಚಿತು. ಅವನು ಹಲ್ಲುಕಡಿಯುತ್ತ ಶಂಭುವಿನ ರಟ್ಟೆಯನ್ನು ಹಿಡಿದು ಕೆಳಕ್ಕೆಳೆದು ಕಾಲಿನಿಂದ ತುಳಿದನು. ಮತ್ತು ಹಾಗೆಯೇ ಅವನನ್ನು ಕೆಳಗಿನ ಚೌಕಿನವರೆಗೆ ಎಳೆತಂದು - "ಹರಾಮಖೋರಾ, ನೀಚಾ ನಿಮ್ಮಪ್ಪನು ಗಳಿಸಿಟ್ಟಿರುವನೇ, ಈ ಮನೆಯ ಒಡೆತನವನ್ನು ನಡಿಸಲಿಕ್ಕೆ? ಆ ಜಾರಿಣಿಯ ಬಲದಿಂದ ಇಷ್ಟು ಡೌಲು ನಡಸಿರುವೆಯಾ ಎಂದು ನುಡಿಯುತ್ತ ಅವನನ್ನು ಚನ್ನಾಗಿ ಥಳಿಸಿದನು ಶಂಭುವಿನನ್ನು ಬಿಡಿಸಿಕೊಳ್ಳಲಿಕ್ಕೆ ಯಾರೂ ಮುಂದೊರೆಯಲಿಲ್ಲ. ಯಾಕಂದರೆ ಆತನು ತನ್ನ ದುರ್ನಡತೆಯಿಂದ ಎಲ್ಲರಿಗೂ ಅಪ್ರಿಯನಾಗಿದ್ದನು ಮೇಲಾಗಿ ಭೀಮರಾಯನ ಅಸಾಬಲವು ಮನೆಯೊಳಗಿನ ಎಲ್ಲ ನೌಕರರಿಗೂ ಗೊತ್ತಿತ್ತು. ಬಳಿಕ ಭೀಮರಾಯನು ಕೆಲವು ಆಳುಗಳಿಗೆ ಶಂಭುವಿನನ್ನು ನೋಡಿಕೊಳ್ಳಲು ಹೇಳಿ, ತಾನು ಮಾಧವರಾಯನ ಕಡೆಗೆ ನಡೆದನು.

ಹಿತ್ತಲಮನೆಯ ಒಂದು ಕೋಣೆಯಲ್ಲಿ ಮಾಧವನು ಮರಣೋನ್ಮುಖನಾಗಿ ಸಾಧಾರಣಪ್ರತಿಯ ಒಂದು ಹಾಸಿಗೆಯ ಮೇಲೆ ಮಲಗಿಕೊಂಡಿದ್ದನು. ಮಲಗಿಕೊಂಡಿದ್ದನನ್ನುವದಕ್ಕಿಂತ ಬಿದ್ದುಕೊಂಡಿದ್ದನೆಂದರೆ ಹೆಚ್ಚು ಶೋಭಿಸುವದು. ಆತನು ಅತ್ಯಂತ ಅಶಕ್ತನಾಗಿದ್ದನು. ಗಟ್ಟಿಯಾಗಿ ಉಸಿರು ಬಿಡಲಿಕ್ಕೆ ಸಹ ಅವನಿಗೆ ಬರುತ್ತಿದ್ದಿಲ್ಲ ಇಂಥ ಶೋಚನೀಯ ಸ್ಥಿತಿಯಲ್ಲಿದ್ದ ಮಾಧವನನ್ನು

ಕಂಡು ಭೀಮರಾಯನ ಹೃದಯವು ಕಳವಳಿಸಿತು. ಅವನು ಭ್ರಾತೃ ವಾತ್ಸಲ್ಯದಿಂದ—"ಅಣ್ಣಾ, ಇದೇನು ನಿಮ್ಮವಸ್ಥೆ?" ಎಂದು ನುಡಿದು ಅವನ ಬಳಿಯಲ್ಲಿ ಕುಳಿತುಕೊಂಡನು. ತಮ್ಮನ ದನಿಕೇಳಿ ಮಾಧವನು ಕಣ್ಣುತೆರೆದು ಅವನನ್ನು ನೋಡಿ ಕಣ್ಣುತುಂಬ ನೀರು ತಂದು ಸಣ್ಣದನಿಯಿಂದ—ತಮ್ಮಾ, ನನ್ನ ಕರ್ಮದ ಪ್ರಾಯಶ್ಚಿತ್ತ ವನ್ನು ನಾನು ಅನುಭವಿಸುವೆನು. ಆ ಜಾರಿಣಿಯು (ಚಂಚಲಾಕ್ಷಿ) ಬಿಂಘುವಿನ ಬೆನ್ನಹತ್ತಿ ನನ್ನ ಅವಸ್ಥೆಯನ್ನು ಈ ಮನೆಗೆ ತಂದಳು. ನನಗೆ ಆಕೆಯ ಕಪಟತನವು ತಿಳಿಯಲಿಲ್ಲ ಪ್ರತ್ಯಕ್ಷ ಅಣ್ಣತಮ್ಮಂದಿರ ಕೂಡ ಬಡಿದಾಡಿದೆನು ಈ ಚಾಂಡಾಲಿನಿಯು ಕಡೆಗೆ ನನಗೆ ವಿಷ ಹಾಕಿದಳು! ಈಗ ಹದಿನೈದು ದಿವಸಗಳಾದವು. ಆ ದುಷ್ಟೆಯು ನನ್ನ ಕೋಣೆಯ ಕಡೆಗೆ ಸಹ ಸುಳಿದಿರುವದಿಲ್ಲ ತಮ್ಮಾ ಭೀಮಾ, ಇನ್ನು ನನ್ನ ಕಥೆಯು ಮುಗಿಯಿತು. ಅಯ್ಯೋ! ಉಬ್ಬಸ ಬಂತು ಸತ್ತೆ! ಸತ್ತೆ!! (ಸ್ವಲ್ಪಹೊತ್ತು ಬಿಟ್ಟು) ಭೀಮಾ, ಇನ್ನು ನಾನು ಬಹಳ ಹೊತ್ತು ಬದುಕುವದಿಲ್ಲ. ನನ್ನ ಮರಣದ ಕಾಲಕ್ಕೆ ನೀನು ಬಂದದ್ದು ನೆಟ್ಟಗಾಯಿತು ಆ ಚಾಂಡಾಲಿನಿಗೆ ಏನೂ ಸಿಗದಂತೆ ಮಾಡುವೆನು. ಕಾರಕೂನನನ್ನು ಕರೆ ಮೃತ್ಯುಪತ್ರವನ್ನು ಬರೆಯಿಸು ಸಹಿ ಮಾಡು ತ್ತೇನೆ; ಎಂದನು. ಭೀಮರಾಯನು ದುಃಖಪಟ್ಟು ಕಾರಕೂನನನ್ನು ಕರೆದು ಮೃತ್ಯುಪತ್ರವನ್ನು ಬರೆಯಿಸಿದನು. ಮೃತ್ಯುಪತ್ರಬರೆಯುವ ಕೆಲಸ ನಡೆದಿರಲು ಭೀಮರಾಯನು ನಾಮಾಂಕಿತ ವೈದ್ಯರನ್ನೂ ಡಾಕ್ಟರುಗಳನ್ನೂ ಕರೆಯಿಸಿದನು. ಅವರೆಲ್ಲರು ಬಂದು ಮಾಧವನ ಪ್ರಕೃತಿಯನ್ನು ನೋಡಿ—"ಈತನ ಆಶೆಯನ್ನು ಬಿಡಬೇಕೆಂದು ಹೇಳಿದರು. ವೈದ್ಯರೂ ಡಾಕ್ಟರರೂ ಮೃತ್ಯುಪತ್ರಕ್ಕೆ ಸಾಕ್ಷಿಯನ್ನು ಹಾಕಿದರು. ಅನಂತರ ಮಾಧವನು ಸಹಿ ಮಾಡಿದನು.

ಮುಂದೆ ಕೆಲಹೊತ್ತಿನ ಮೇಲೆ ಭೀಮರಾಯನು ಸಹಜವಾಗಿ

ಚಂಚಲಾಕ್ಷಿಯ ಕೋಣೆಯ ಕಡೆಗೆ ಹೋದನು. ಶಂಭುವು ಪಲ್ಲಂಗದ ಮೇಲೆ ಮಲಗಿಕೊಂಡಿದ್ದು ಚಂಚಲಾಕ್ಷಿಯು ಅವನ ಮೈಗೆ ಎಣ್ಣೆ ಹಚ್ಚಿ ತಿಕ್ಕುತ್ತಿದ್ದಳು. ಆಗ ಆತನು ಆ ದುಷ್ಟೆಯ ನೀಚತನಕ್ಕೆ ವ್ಯಸನಪಡುತ್ತ ಅಲ್ಲಿಂದ ಹೊರಳಿ ಮಾಧವನ ಕೋಣೆಗೆ ಬಂದನು. ಚಂಚಲಾಕ್ಷಿಗೆ ಗಂಡನ ಮೃತ್ಯುಪತ್ರದ ಸಂಗತಿಯು ಗೊತ್ತಾಗಿತ್ತು. ಆದ್ದರಿಂದ ಅವಳು ಕೂಡಲೆ ಒಂದು ಪತ್ರವನ್ನು ಬರೆದು ಭೀಮರಾಯನ ಕಡೆಗೆ ಕಳಿಸಿದಳು. ಅದನ್ನು ಅಕ್ಷರಶಃ ನಮ್ಮ ವಾಚಕರಿಗಾಗಿ ಇಲ್ಲಿ ಕೊಡುತ್ತೇವೆ.

"ಈ ಮನೆತನದ ಹಾಗು ಈ ಮನೆಯ ಮುಖ್ಯ ಮನುಷ್ಯನ ಸಂಬಂಧವನ್ನು ಬಿಟ್ಟುಕೊಟ್ಟು ನಾನು ಶಂಭುವಿನ ಸಂಗಡ ಹೊರಟು ಹೋಗುತ್ತೇನೆ-!!"

ಪತ್ರವನ್ನು ಓದಿ ಭೀಮರಾಯನು ಮಾಧವನಿಗೆ ತೋರಿಸಿದನು! ಅದನ್ನು ನೋಡಿ ಆತನು ಸಂತೋಷವನ್ನು ಪ್ರಕಟಿಸಿ— "ಪ್ರಿಯಬಂಧೂ ಇನ್ನು ನಾನು ಸುಖದಿಂದ ಪ್ರಾಣಬಿಡುವೆನು. ನನ್ನ ಆಯುಷ್ಯವು ತೀರುತ್ತ ಬಂದಿರುವದು! ಬೇಗನೆ ದರ್ಭಾಸನವನ್ನು ಹಾಕಿ ನನ್ನ ಬಾಯಲ್ಲಿ ತುಳಸೀಪತ್ರವನ್ನಿಟ್ಟು ಬ್ರಾಹ್ಮಣರ ಕಡೆಯಿಂದ ಶ್ರೀಗೋಪಾಲ ಸಹಸ್ರನಾಮವನ್ನು ಪಠಣ ಮಾಡಿಸು."

ಮಾಧವನ ಪ್ರಕೃತಿಯು ಕ್ಷಣಶಃ ಕ್ಷೀಣವಾಗಹತ್ತಿದ್ದನ್ನು ನೋಡಿ ಭೀಮರಾಯನು ಆತನ ಇಚ್ಛೆಯಂತೆ ಎಲ್ಲ ಕೆಲಸಗಳನ್ನು ಮಾಡಿದನು! ಮಾಧವನು ಶ್ರೀಕೃಷ್ಣನ ಮಂಗಲನಾಮವನ್ನುಚ್ಚರಿಸಿದನು! ಮುಂದೆ ಒಂದೆರಡು ಗಳಿಗೆಗಳಲ್ಲಿ ಆವನ ಪ್ರಾಣೋತ್ಕ್ರಮಣವಾಗಿಹೋಯಿತು!! ಅಂತ್ಯಕಾಲದಲ್ಲಿ ಆತನಿಗೆ ಭಗವನ್ನಾಮಸ್ಮರಣೆಯು ಲಭಿಸಿದ್ದರಿಂದ ಅವನ ಸಹಸ್ರ ಪಾಪಗಳೆಲ್ಲ ಕ್ಷಮ್ಯವಾಗಿ ಅವನು ನಿಶ್ಚಯವಾಗಿ ಸ್ವರ್ಗಾರೋಹಣಮಾಡಿದನು!! ಬಳಿಕ ಭೀಮ

ರಾಯನೇ ಮುಂದಿನ ಎಲ್ಲ ಕೆಲಸಗಳನ್ನು ತೀರಿಸಿ, ಅವನ ಕ್ರಿಯಾ ಕರ್ಮಗಳನ್ನು ಮಾಡಿದನು.

## [ 12 ]

ಹಿಂದೆ ಏಳನೆಯ ಪ್ರಕರಣದ ಕೊನೆಯಲ್ಲಿ ನಮ್ಮ ಚರಿತ್ರನಾಯಿಕೆಯಾದ ಮನೋರಮೆಯನ್ನು ದರವಡೆಗಾರರು ಮಧ್ಯರಾತ್ರಿಯಲ್ಲಿ ಅಪಹರಿಸಿಕೊಂಡು ಹೋದರೆಂದು ಹೇಳಿದೆಯಷ್ಟೇ? ಆದರೆ ಮುಂದೆ ಆಕೆಯ ಗತಿಯೇನಾಯಿತೆಂಬದರ ಕಡೆಗೆ ವಾಚಕರ ಲಕ್ಷ್ಯವು ಹೋಗಿರಬಹುದು. ಆದ್ದರಿಂದ ಅದನ್ನು ಈ ಪ್ರಕರಣದಲ್ಲಿ ಹೇಳುವೆವು.

ಮನೋರಮೆಯನ್ನು ದರವಡೆಗಾರರು ಎತ್ತಿಕೊಂಡು ಹೋಗುವಾಗ ಅವರು ಆಕೆಗೆ ಒಂದು ಸೀಸೆಯನ್ನು ಮೂಸಿನೋಡಿಸಿದರು. ಆದರಿಂದ ಆಕೆಯು ಎಚ್ಚರತಪ್ಪಿತು. ಮರುದಿನ ಅವಳು ಎಚ್ಚತ್ತು ನೋಡುವಷ್ಟರಲ್ಲಿ ತಾನು ತಮ್ಮ ಮನೆಯಲ್ಲಿರದೆ ಯಾವದೋ ಒಂದು ಭವ್ಯವಾದ ದಿವಾಣಖಾನೆಯಲ್ಲಿರುವೆನೆಂಬದು ಗೊತ್ತಾಯಿತು. ಆಗ ಅವಳು ಭಯಚಕಿತಳಾದಳು. ತಾನು ಇಲ್ಲಿಗೆ ಯಾವಾಗ, ಹ್ಯಾಗೆ ಬಂದೆನು? ಇಲ್ಲಿ ತನ್ನನ್ನು ಯಾರು ತಂದಿಟ್ಟರು? ಎಂಬ ಸಂಗತಿಗಳಾವವೂ ಆಕೆಗೆ ತಿಳಿಯದಾದವು ಕಡಗೆ ಅವಳು ತನ್ನ ವಿಲಕ್ಷಣ ತರ್ಕಶಕ್ತಿಯಿಂದ "ಯಾವನೋ ಒಬ್ಬ ಶ್ರೀಮಂತ ವಿಷಯಲಂಪಟನು ತನ್ನ ನೀಚ ಉದ್ದೇಶಕ್ಕಾಗಿ ನನ್ನನ್ನು ಇಲ್ಲಿಗೆ ಮೋಸದಿಂದ ತಂದಿರುವನು," ಎಂದು ನಿಶ್ಚಯಿಸಿದಳು. ತನ್ನನ್ನು ಅಪಹರಿಸಿ ತಂದ ನೀಚನಿಗೆ ಚನ್ನಾಗಿ ಶೈತೋರಿಸಬೇಕೆಂಬ ವಿಚಾರಗಳು ಅವಳಲ್ಲಿ ಸ್ವಾಭಾವಿಕವಾಗಿ ಹುಟ್ಟಿದವು ಆಗ ಅವಳು ಮನಸ್ಸಿನಲ್ಲಿ— ದುರ್ನಿವಾರವಾದ ಗಂಡಾಂತರವು ನನ್ನ ಮೇಲೆ ಬಂದಿರುವದು. ಆದರೆ ಸಾಯುವ ವರೆಗೆ ಪತಿವ್ರತೆಯನ್ನು ಕಾಯ್ದುಕೊಂಡು

ದುರ್ದೈವದೊಡನೆ ಕಾದಾಡಲಿಕ್ಕೆ ಸಿದ್ಧಳಾಗಬೇಕು. ಪರಮೇಶ್ವರಾ, ಈ ಕಾಲಕ್ಕೆ ನೀನು ನನಗೆ ಸಹಾಯಕನಾಗಪ್ಪಾ! ಎಂದು ನುಡಿದು ಎದ್ದು ನಿಂತಳು.

ದಿವಾಣಖಾನೆಯು ಯಾವದೊಂದು ಅರಮನೆಯಂತೆ ಸುಂದರವಾಗಿತ್ತು. ಅದರಲ್ಲಿ ಒಂದು ಕಡೆಗೆ ಮುಖಮಲ್ಲಿನಿಂದ ಪರಿಶೋಭಿಸುವ ಪಲ್ಲಂಗವಿತ್ತು, ಮತ್ತೊಂದೆಡೆಯಲ್ಲಿ ದುಂಡಗಿನ ಟೇಬಲ್ಲಿನ ಸುತ್ತುವರಿದು ಖುರ್ಚಿಗಳು ಮಂಡಿಸಲ್ಪಟ್ಟಿದ್ದವು ಪ್ರತಿಯೊಂದು ಖುರ್ಚಿಯ ಮೇಲೆ ರೇಶಿಮೆಯ ಗಾದಿಗಳು ಶೋಭಿಸುತ್ತಿದ್ದು, ಟೇಬಲ್ಲಿನ ಮೇಲೆ ಸುಂದರವಾದ ಮಖಮಲ್ಲು ಹಾಸಲ್ಪಟ್ಟಿತ್ತು. ಚಿತ್ರವಿಚಿತ್ರ ಬಣ್ಣಗಳ ಹಾಗು ತರತರದ ಪ್ರಸಂಗಗಳ ಹಲವು ತಸಬೀರುಗಳು ಆ ದಿವಾಣಖಾನೆಯ ಶೋಭೆಯನ್ನು ಹೆಚ್ಚಿಸುತ್ತಿದ್ದವು. ದೊಡ್ಡ ದೊಡ್ಡ ಐದು ನಿಲುವುಗನ್ನಡಿಗಳು ಗೋಡೆಗೆ ಆನಿಸಿ ನಿಲ್ಲಿಸಲ್ಪಟ್ಟಿದ್ದವು; ಉತ್ತಮೋತ್ತಮ ವಸ್ತ್ರಾಲಂಕಾರಗಳು ಅಲ್ಲಿ ಇಡಲ್ಪಟ್ಟಿದ್ದವು; ಅದರಲ್ಲಿದ್ದ ಮನುಷ್ಯನು ದೇಹಧರ್ಮದ ವಿಧಿಗೆ ಮೊದಲು ಮಾಡಿಕೊಂಡು ಯಾವ ಕೆಲಸಕ್ಕೂ ಹೊರಗೆ ಹೋಗಬೇಕೆನ್ನುವ ಹಾಗಿದ್ದಿಲ್ಲ.

ಈ ಪ್ರಕಾರ ಸುಖೋಪಭೋಗಕ್ಕೆ ಯೋಗ್ಯವಾದ ದಿವಾಣಖಾನೆಯನ್ನು ನೋಡಿ, ಮನೋರಮೆಯು ಆಶ್ಚರ್ಯಪಟ್ಟು, ಮೆಲ್ಲ ಮೆಲ್ಲನೆ ಅದರ ಪರಿಚಯ ಮಾಡಿಕೊಳ್ಳುವದಕ್ಕಾಗಿ ಹೊರಟಳು. ಅವಳು ಆ ದಿವಾಣಖಾನೆಯ ಮುಕ್ತದ್ವಾರವಿದ್ದ ಒಂದೆರಡು ಭಾಗಗಳನ್ನು ನೋಡಿದಳು. ಉಳಿದವುಗಳ ಬಾಗಿಲಗಳು ಭದ್ರವಾಗಿದ್ದರಿಂದ ಅವುಗಳನ್ನು ನೋಡಲಿಕ್ಕೆ ಆಕೆಗೆ ಅನುಕೂಲವಾಗಲಿಲ್ಲ. ಆಗ ಆಕೆಯು ಆ ಮನೆಯ ಸಂಬಂಧವಾಗಿ ಹೆಚ್ಚು ಸಂಗತಿಯನ್ನು ತಿಳಿಯಲಾರದೆ ಉದಾಸೀನಳಾದಳು. ಹೀಗೆ ಅವಳು ಉದಾಸೀನ್ಯದಿಂದ ತಿರುಗುತ್ತ

ಶನೇಸಾರೆ ಮತ್ತೊಂದು ಕೋಣೆಗೆ ಹೋಗಲು ಅಲ್ಲಿಯೊಂದು ಕಾಗೆ ದವು ಬಿದ್ದದ್ದನ್ನು ಕಂಡಳು. ಆಗ ಅವಳು ವಿಸ್ಮಯಪಟ್ಟು ಅದನ್ನು ಕೈಯಲ್ಲಿ ತಕ್ಕೊಂಡಳು; ಮತ್ತು ಅದರಲ್ಲಿ ಬರೆದ ಸಂಗತಿಯನ್ನು ಓದತೊಡಗಿದಳು:—

"ಪ್ರಿಯ ಮನೋರಮೇ, -

ನೀನು ಈಗ ಯಾವನೊಬ್ಬ ಶತ್ರುವಿನ ಸೆರೆಯಲ್ಲಿರದೆ ಒಬ್ಬ ಸನ್ಮಿತ್ರನ ಆತಿಥ್ಯದಲ್ಲಿರುವೆನೆಂದು ತಿಳಿ. ಈ ದಿವಾಣಖಾನೆಯಲ್ಲಿರುವ ಸರ್ವಸಾಮಾನುಗಳನ್ನು ನೀನು ಬೇಕಾದ ಹಾಗೆ ಉಪಯೋಗಿಸಿಕೊಳ್ಳಬಹುದು. ಅವೆಲ್ಲ ನಿನ್ನ ಸಂತೋಷಕ್ಕೋಸ್ಕರ ಇಡಲ್ಪಟ್ಟಿರುತ್ತವೆ ಇಲ್ಲಿ ಇಲ್ಲದಂಥ ಯಾವದೊಂದು ಪದಾರ್ಥವು ನಿನಗೆ ಬೇಕಾದರೆ, ಅದರಂತೆ ಪತ್ರಬರೆದು ಇದೇ ಸ್ಥಳದಲ್ಲಿ ತಂದಿಡು; ಅಂದರೆ ನಿನಗೆ ಆ ಪದಾರ್ಥವು ದೊರೆಯುವದು"

ಪತ್ರವನ್ನೋದಿ ಮನೋರಮೆಗೆ ತಾನು ಕನಸಿನಲ್ಲಿರುವೆನೋ, ಅಥವಾ ಎಚ್ಚರಿಕೆಯಲ್ಲಿರುವೆನೋ ಎಂಬದು ಸಹ ತಿಳಿಯದಾಯಿತು. ಆಗ ಅವಳು ಆ ಉಪ್ಪರಿಗೆಯ ಮೇಲಿನ ಒಂದು ಬಾಗಿಲ ಬಳಿಗೆ ಹೋಗಿ ಅದನ್ನು ದಪ್ ದಪ್ ಬಡಿದು "ಯಾರಾದರೂ ಒಳಗೆ ಇದ್ದರೆ, ಈ ಬಾಗಿಲ ತೆರೆಯಿರಿ" ಎಂದು ಕೂಗಿದಳು ಆದರೆ ಅದು ವ್ಯರ್ಥವಾಯಿತು. ಆಕೆಗೆ ಪ್ರತ್ಯುತ್ತರವನ್ನು ಯಾರೂ ಕೊಡಲಿಲ್ಲ. ಅವಳು ಬಾಗಿಲಕ್ಕೆ-ಗೋಡೆಗೆ ಕಿವಿಯಾನಿಸಿ ಏನಾದರೂ ಸಪ್ಪಳ ಕೇಳಿಸುವದೇನೆಂದು ನೋಡಿದಳು. ಕಡೆಗೆ ಆಕೆಗೆ ನಿರಾಶೆಯ ಹೊರತು ಬೇರೆ ಏನೂ ದೊರೆಯಲಿಲ್ಲ ಆಗ ಅವಳು ಬೇಸತ್ತು ತಾನು ಮಲಗಿದ್ದ ಸ್ಥಳಕ್ಕೆ ಬರಲು ಅಲ್ಲಿಯೊಂದು ಕೋಣೆಯ ಬಾಗಿಲವು ತೆರೆದಂತೆ ಕಾಣಿಸಿತು. ಆ ಕೋಣೆಯಲ್ಲಿ ಹಲ್ಲುಜ್ಜುವ ಪುಡಿ, ಬಿಸಿನೀರು, ತಂಬಿಗೆ ಮೊದಲಾದ ಸ್ನಾನೋಪಕರಣಗಳು ಇದ್ದವಿ

ದ್ದವು. ಆಕೆಯು ದಿಙ್ಮೂಢಳಾಗಿ ದೇಹಧರ್ಮವನ್ನು ತೀರಿಸಿಕೊಂಡು ಸ್ನಾನವಮಾಡಿದಳು. ಬಳಿಕ ಒಗೆದ ಬಟ್ಟೆಯನ್ನುಟ್ಟುಕೊಂಡು ದಿವಾಣಖಾನೆಗೆ ಬರುವಷ್ಟರಲ್ಲಿ ಟೇಬಲ್ಲಿನ ಮೇಲೆ ಉಪಾಹಾರದ ಪದಾರ್ಥಗಳೂ, ಕುಡಿಯುವ ನೀರೂ, ತಾಂಬೂಲವೂ ಸಿದ್ಧಪಡಿದ್ದವು. ಬರಹಣಿಗೆಯ ಸಾಧನಗಳು, ವಾಚನೀಯ ಪುಸ್ತಕಗಳು ಇಡಲ್ಪಟ್ಟಿದ್ದವು. ಮನೋರಮೆಯು ಮತ್ತಿಷ್ಟು ಗೊಂದಲದಲ್ಲಿ ಬಿದ್ದಳು. ತನ್ನ ಕಣ್ಣಿಗೆ ಯಾವ ಮನುಷ್ಯರೂ ಬೀಳದೆ ಈ ಮನೆಯಲ್ಲಿ ಇಷ್ಟು ವ್ಯವಸ್ಥೆಯನ್ನು ಯಾರು ಮಾಡುತ್ತಿರಬಹುದು? ಎಂಬದರ ಮರ್ಮವು ಆಕೆಗೆ ತಿಳಿಯದಾಯಿತು. ಅವಳು ಸ್ವಲ್ಪ ಉಪಾಹಾರವನ್ನು ತಕ್ಕೊಂಡು ನೀರು ಕುಡಿದಳು. ಬಳಿಕ ಆಕೆಯು ಅಲ್ಲಿಟ್ಟಿದ್ದ ಪುಸ್ತಕಗಳ ಕಡೆಗೆ ಕಣ್ಣೊರಳಲು ಒಂದು ಪತ್ರವು ಸಿಕ್ಕಿತು ಅದರಲ್ಲಿ—"ಇದೆಲ್ಲ ಫಲಾಹಾರವನ್ನು ನಿನಗೋಸ್ಕರ ಇಟ್ಟಿದೆ ಮಧ್ಯಾಹ್ನದ ೧೨ ಗಂಟೆಗೆ ಸರಿಯಾಗಿ ಮಹಡಿಯ ಮೇಲಿನ ಕೋಣೆಯಲ್ಲಿ ಭೋಜನದ ವ್ಯವಸ್ಥೆಯು ಮಾಡಲ್ಪಡುವದು" ಎಂದು ಬರೆದಿತ್ತು.

ಪತ್ರವನ್ನು ಚಲ್ಲಿಕೊಟ್ಟು ಮನೋರಮೆಯು ತುಳಸೀಕೃತ ರಾಮಾಯಣಪುಸ್ತಕವನ್ನು ತಕ್ಕೊಂಡು ಅದರಲ್ಲಿ ಸೀತಾಪಹರಣ ಪ್ರಸಂಗವನ್ನು ಓದತೊಡಗಿದಳು. ಆಕೆಯು ವಾಚನದಲ್ಲಿ ತಲ್ಲೀನಳಾಗಿ ಬಹಳಹೊತ್ತು ಓದುತ್ತ ಕುಳಿತಳು. ಅಷ್ಟರಲ್ಲಿ ಘಡಿಯಾರದಲ್ಲಿ ೧೨ ಹೊಡೆದದ್ದರಿಂದ ಅವಳು ಉಪ್ಪರಿಗೆಯ ಮೇಲೆ ಹೋದಳು. ಆಗ ಅವಳಿಗೆ ಅಲ್ಲಿಯೊಂದು ಕೋಣೆಯು ಕಾಣಿಸಿತು. ಆಕೆಯು ಅದರಲ್ಲಿ ಹಣಿಕಿ ಹಾಕಿದಳು. ಕೋಣೆಯು ಚಚ್ಚೌಕವಿದ್ದು ಮಧ್ಯದಲ್ಲಿ ಒಂದು ಸುಂದರವಾದ ರೇಶ್ಮೆಯ ಆಸನವನ್ನು ಹಾಸಿದ್ದರು. ಅದರ ಮುಂದಿನ ಬೆಳ್ಳಿಯ ತಾಟಿನಲ್ಲಿ ಬಿಸಿ ಬಿಸಿ ಪದಾರ್ಥಗಳು ಬಡಿಸಲ್ಪಟ್ಟಿದ್ದವು. ಒಂದು ಬೆಳ್ಳಿಯ ಹೂಜೆಯಲ್ಲಿ ಪನ್ನೀರು ಇಡಲ್ಪಟ್ಟಿ

ದ್ದವು. ಆಸನದ ಮೇಲೆ ಒಂದು ಪತ್ರವಿತ್ತು. ಮನೋರಮೆಯು ಬೆರಗಾಗಿ ಒಳಗೆ ಕಾಲಿಟ್ಟು ಪತ್ರವನ್ನು ತಕ್ಕೊಂಡಳು. ಅದರಲ್ಲಿ— "ಅಡಿಗೆಯುನ್ನು ಕುಲೀನ ಬ್ರಾಹ್ಮಣನಿಂದ ಮಾಡಿಸಿರುತ್ತದೆ. ಸಂಕೋಚವಿಲ್ಲದೆ ಊಟಮಾಡಬೇಕು. ರಾತ್ರಿ ಒಂಬತ್ತು ಗಂಟೆಗೆ ಇದೇ ಕೋಣೆಯಲ್ಲಿ ಸಂಜೆಯ ಉಪಾಹಾರವು ಸಿಗುವದು." ಎಂದು ಬರೆದಿತ್ತು; ಈ ಎಲ್ಲ ತಂತ್ರಗಳನ್ನು ಕಂಡು ಮನೋರಮೆಯ ಚಿಕಿತ್ಸಕ ಬುದ್ಧಿಯು ಜಾಗ್ರತವಾಯಿತು. ಈ ಉಪ್ಪರಿಗೆಗೆ ಒಂದೇ ಬಾಗಿಲವಿದ್ದು ಇದನ್ನೆಲ್ಲ ಸಿದ್ಧಪಡಿಸಿದ ಮನುಷ್ಯನು ಎಲ್ಲಿಂದ ಬಂದಿರಬಹುದು! ಎಂದು ಅವಳು ಆ ಕೋಣೆಯನ್ನು ಸೂಕ್ಷ್ಮವಾಗಿ ನಿರೀಕ್ಷಿಸಿದಳು. ಆ ಕೋಣೆಯ ನೆಲಕ್ಕೆ ಸಂಗಮರವರೀಯ ತುಂಡುಗಳು ಜೋಡಿಸಲ್ಪಟ್ಟಿದ್ದವು; ಹಾಗು ಗೋಡೆಗಳು ಶುದ್ಧಗಚ್ಚಿನವಿದ್ದವು. ಆಕೆಗೆ ಅಲ್ಲಿ ಬೇರೆ ಬಾಗಿಲವಿದ್ದ ಲಕ್ಷಣವು ಕಂಡುಬರಲಿಲ್ಲ. ಕಡೆಗೆ ಅವಳು ಕುಂಠಿತಳಾಗಿ ಊಟ ಮಾಡಿದಳು; ಮತ್ತು ಆ ಕೋಣೆಯ ಶೋಧದ ವಿಚಾರವನ್ನೇ ಮಾಡುತ್ತ ದಿವಾಣಖಾನೆಗೆ ಬಂದಳು; ತಾಂಬೂಲವು ಸಿದ್ಧವಾಗಿತ್ತು; ಆಕೆಯು ಒಂದೆರಡು ವೀಡೆಗಳನ್ನು ತಿಂದು ಬಳಿಯಲ್ಲಿರುವ ಪಲ್ಲಂಗದ ಮೇಲೆ ವಿಚಾರ ಮಾಡುತ್ತ ಅಡ್ಡಾದಳು. ಸ್ವಲ್ಪ ಹೊತ್ತಿನಲ್ಲಿ ಆಕೆಗೆ ಗಡದ್ದು ನಿದ್ದೆ ಹತ್ತಿ ಹೋಯಿತು

ಮನೋರಮೆಯು ಎದ್ದು ನೋಡುವಷ್ಟರಲ್ಲಿ ಮೂರುಬಡಿದು ಹೋಗಿತ್ತು; ಅವಳು ಮುಖಪ್ರಕ್ಷಾಲನ ಮಾಡಿಕೊಂಡು ಪುನಃ ರಾಮಾಯಣವನ್ನು ಓದುತ್ತ ಕುಳಿತಳು; ಹೊತ್ತು ಮುಳುಗಿ ೯ ಗಂಟೆಯಾಗುವವರೆಗೆ ಅವಳು ಕೂತ ಸ್ಥಳಬಿಟ್ಟು ಕದಲಲಿಲ್ಲ. ಬಳಿಕ ಅವಳು ಉಪ್ಪರಿಗೆಯ ಮೇಲೆ ಹೋದಳು. ಅಲ್ಲಿ ಉಪಾಹಾರದ ಸರ್ವ ಸಿದ್ಧತೆಯಿತ್ತು. ಆದರೆ ಹಸಿವೆಯಿಲ್ಲದ್ದರಿಂದ ಆಕೆಯು

ಉಪಾಹಾರವನ್ನು ತಕ್ಕೊಳ್ಳದೆ ರಾತ್ರಿಯಲ್ಲಿ ಎಚ್ಚತ್ತು ದಿವಾಣಖಾನೆ ಯನ್ನು ಶೋಧಿಸುವ ನಿಶ್ಚಯ ಮಾಡಿದಳು.

ಈ ಮಾತಿಗೆ ನಾಲ್ಕೆಂಟು ದಿವಸಗಳು ಕ್ರಮಿಸಿದವು. ಮನೋರಮೆಯ ಪ್ರಯತ್ನಗಳೆಲ್ಲ ನಿಷ್ಫಲವಾದವು ಆಕೆಯ ಚಾತುರ್ಯವು ಕೊನೆಸಾಗದೆ ನಿಂತಿತು! ಕಡೆಗೆ ಅವಳು ಒಂದು ದಿನ ಧೈರ್ಯ ಮಾಡಿ "ನನ್ನನ್ನು ಸೆರೆಯಲ್ಲಿರಿಸಿದವರನ್ನು ಕಾಣುವ ಇಚ್ಛೆಯು ನನಗಿರುತ್ತದೆ" ಎಂಬರ್ಥದ ಒಂದು ಪತ್ರವನ್ನು ಬರೆದು ಮಧ್ಯಾಹ್ನದ ೧೨ ಗಂಟೆಗೆ ಊಟಕ್ಕೆ ಹೋದಾಗ ಇಟ್ಟು ಬಂದಳು

ಹೊತ್ತು ಮುಳುಗಿ ಕತ್ತಲೆಯಾಯಿತು. ಒಂದು ತಾಸಾಯಿತು; ೨ನೆಯ ತಾಸು ಕ್ರಮಿಸಿ ೩ನೆಯ ತಾಸಿಗೆ ಪ್ರಾರಂಭವಾಯಿತು. ಮನೋರಮೆಯು ರಾಮಾಯಣದ ವಾಚನದಲ್ಲಿ ತಲ್ಲೀನಳಾಗಿದ್ದಳು. ದೀಪಜ್ಯೋತಿಯು ಕನ್ನಡಿಯ ಪ್ರಕಾಶದಿಂದ ಉದ್ದೀಪವಾಗಿತ್ತು. ಇಂಥ ಸಮಯದಲ್ಲಿ ದಿವಾಣಖಾನೆಯ ಬಂದು ಬಾಗಿಲ ಕಡೆಯಿಂದ "ಒಳಗೆ ಬರಬಹುದೇನು?" ಎಂಬ ಶಬ್ದವು ಸ್ಪಷ್ಟವಾಗಿ ಕೇಳಬಂದಿತು; ಸ್ವರವು ಪುರುಷನದಾದ್ದರಿಂದ ಮನೋರಮೆಯ ಎದೆಯು ಧಸ್ಸೆಂದಿತು. ಅವಳು ತೀರ ಗಾಬರಿಯಾದಳು; ಆದರೂ ಅವಳು ಸಮಯೋಚಿತ ಧೈರ್ಯವನ್ನು ತಂದುಕೊಂಡು ಮತ್ತು ಕುಳಿತಸ್ಥಳದಿಂದ ಎದ್ದು ನಿಂತು ನುಡಿದಳೇನಂದರೆ—"ಯಾರವರು? ಇತ್ತ ನನ್ನೆದುರಿಗೆ ಬರಬೇಕು"

ಮನೋರಮೆಯು ಇಷ್ಟು ನುಡಿಯುವಷ್ಟರಲ್ಲಿ ಒಬ್ಬ ತರುಣನು ಒಳಗೆ ಕಾಲಿಟ್ಟನು. ಆತನ ಮೈ ಮೇಲೆ ಬಹುಮೂಲ್ಯವಾದ ವಸ್ತ್ರಗಳಿದ್ದವು; ಅವನ ಸುಂದರ ಮುಖಲಕ್ಷಣವು ಅವನ ಶ್ರೀಮಂತಿಕೆಯನ್ನು ವ್ಯಕ್ತಗೊಳಿಸುತ್ತಿತ್ತು. ಅವನು ಸಾಧಾರಣ ನಿಲುವಿಕೆಯವನಾಗಿದ್ದು ಇಪ್ಪತ್ತೈದರ ಹೊರಗೆ ಮೂವತ್ತರ ಒಳಗಿರುವ ವಯಸ್ಸಿನವನಾಗಿದ್ದನು. ನವನಾಗರಿಕತೆಯ ಕ್ರಾಪಿನ ವೈಭವವು ಅವನಲ್ಲಿ

ಸ್ಪುಟವಾಗಿ ತೋರುತ್ತಿತ್ತು. ಅವನು ಮನೋರಮೆಯನ್ನು ಎವೆಯಿಕ್ಕದೆ ನೋಡುತ್ತಿದ್ದನು. ಮನೋರಮೆಯಾದರೂ ಅವನನ್ನು ನೋಡುತ್ತಿದ್ದಳು. ಇಬ್ಬರ ಉದ್ದೇಶಗಳು ಮಾತ್ರ ಭಿನ್ನವಿದ್ದವು. ಹೀಗೆ ಕೆಲ ಹೊತ್ತು ಇಬ್ಬರೂ ಪರಸ್ಪರರನ್ನು ನೋಡುತ್ತ ಸುಮ್ಮನೆ ನಿಂತಬಳಿಕ, ತರುಣನು ಮೌನವನ್ನು ತ್ಯಜಿಸಿ "ಏನು ಅಪ್ಪಣೆ?" ಎಂದು ನುಡಿದನು.

ಮನೋರಮೆ—"ತಾವು ಯಾರು?"

ತರುಣ—ನಾನು ಯಾವನೇ ಇರಲೊಲ್ಲನೇಕೆ? ಈಗ ನಿಮ್ಮ ಸೇವಕನಾಗಿದ್ದೇನೆ. ನಿಮಗೆ ಇಲ್ಲಿ ಏನಾದರೂ ತ್ರಾಸವಾಗುತ್ತಿದ್ದರೆ ಹೇಳಬೇಕು. ನನ್ನ ಕೈಲಾದಮಟ್ಟಿಗೆ ನಿಮ್ಮ ದುಃಖವನ್ನು ಹೋಗಲಾಡಿಸುವೆನು.

ಮನೋರಮೆ—ನನ್ನನ್ನು ಇಲ್ಲಿ ಇರಿಸಿದವರಾರೆಂಬದನ್ನು ತಿಳಿಯುವ ಇಚ್ಛೆಯು ನನಗಿರುತ್ತದೆ.

ತರುಣ—ನಿಮ್ಮ ಈ ಇಚ್ಛೆಗೆ ಕಾರಣನಾದವನು ಬೇರೆ ಯಾವನೂ ಇರದೆ ನಿಮ್ಮೆದುರಿಗೆ ನಿಂತಿರುವ ಈ ದಾಸನೇ ಅವನು.

ಮನೋರಮೆ—ಹಾಗಾದರೆ, ತಾವು ಯಾರು?

ತರುಣ—ಈ ಮೊದಲೇ ಹೇಳಲಿಲ್ಲವೇ ನಿಮ್ಮ ಸೇವಕನೆಂದು?

ಮನೋರಮೆ—ನಿಮ್ಮ ಜಾತಿ ಯಾವದು?

ತರುಣ—ನಿಮ್ಮ ಜಾತಿ ಯಾವದೋ ಅದೇ ನನ್ನದು.

ಮನೋರಮೆ—ಉದ್ಯೋಗ?

ರರುಣ—ಇನಾಮು ಹೊಲಗಳ ಉಪಭೋಗ; ಹಾಗು ಸಾವುಕಾರಿಕೆ.

ಈ ಪ್ರಕಾರ ಸಂಭಾಷಣವು ನಡೆದಿರಲು ಮನೋರಮೆಯು ಮನಸ್ಸಿನಲ್ಲಿ ಏನೇನೋ ವಿಚಾರ ಮಾಡಿ ಸ್ಮಿತವದನದಿಂದ ನುಡಿದಳೇನಂದರೆ

ಮನೋರಮೆ—"ಕ್ಷಮಿಸಿರಿ, ನೀವು ಇಷ್ಟು ದೊಡ್ಡ ಮನುಷ್ಯರಿರುವಿರೆಂಬದು ನನಗೆ ಮೊದಲು ಗೊತ್ತಾಗಲಿಲ್ಲ. ನಿಮ್ಮೊಡನೆ ನಾನು ಇಷ್ಟು ಪ್ರಶ್ನೋತ್ತರಗಳನ್ನು ನಡಿಸಿದ್ದು ಶುದ್ಧ ತಪ್ಪಾಯಿತು. ಇತ್ತ ಈ ಖುರ್ಚಿಯ ಮೇಲೆ ಕುಳಿತುಕೊಳ್ಳಬೇಕು."

ಇಷ್ಟು ನುಡಿದು ಮನೋರಮೆಯು ಒಂದು ಖುರ್ಚಿಯನ್ನು ತರುಣನ ಮುಂದೆ ಸರಿಸಿ ಆತನು ಕುಳಿತ ಬಳಿಕ ಸ್ವಲ್ಪ ಅಂತರದ ಮೇಲೆ ತಾನೂ ಒಂದು ಖುರ್ಚಿಯ ಮೇಲೆ ಕುಳಿತು ಪುನಃ ತರುಣನನ್ನು ಕುರಿತು--

ಮನೋರಮೆ—ಸಾಹೇಬ, ನನ್ನನ್ನು ಇಲ್ಲಿ ಯಾಕೆ ಸೆರೆ ಇಡೋಣವಾಯಿತು?

ತರುಣ(ಸಂತೋಷದಿಂದ)—ಸುಂದರೀ, ನೀನು ನನ್ನ ಮೇಲೆ ಸಿಟ್ಟಾಗಿಲ್ಲವಷ್ಟೇ, ನಿನ್ನ ಈ ಸೌಜನ್ಯವನ್ನು ನೋಡಿ ನನಗೆ ಸಂತೋಷವಾಗುತ್ತದೆ.

ಮನೋರಮೆ—ತಾವು ನನ್ನನ್ನು ಇಲ್ಲಿ ತಂದಿಟ್ಟ ಕಾರಣವನ್ನು ಹೇಳಲಿಲ್ಲ ಅದು ತಿಳಿದ ಹೊರತು ನನ್ನ ಸಂತೋಷ—ಅಸಂತೋಷಗಳನ್ನು ಹ್ಯಾಗೆ ಹೇಳಲಿ?

ತರುಣ—ನಾನು ನಿಮ್ಮ ಜಾತಿಯವನೇ ಇರುವೆನೆಂದು ಹೇಳಿರುವೆನಲ್ಲವೇ?

ಮನೋರಮೆ—ಹೌದು ಹೇಳಿರುವಿರಿ; ಆದರೆ,

ತರುಣ—ನನ್ನ ಒಂದು ವಿನಂತಿಯನ್ನು ಮಾನ್ಯ ಮಾಡಬಹುದಲ್ಲವೇ?

ಮನೋರಮೆ—ಅದು ಯಾವ ವಿನಂತಿಯು?

ತರುಣ--ನೀವಿನ್ನೂ ಅವಿವಾಹಿತ ಸ್ಥಿತಿಯಲ್ಲಿಯೇ ಇರುವಿರಷ್ಟೇ?

ಮನೋರಮೆ—ನೀವು?

ತರುಣ—ನಿಮ್ಮಂತೆಯೇ;

ಮನೋರಮೆ—ನನ್ನಲ್ಲಿ ನೀವು ಯಾವ ವಿನಂತಿಯನ್ನು ಮಾಡಿಕೊಳ್ಳುವಿರಿ?

ತರುಣ—ನಿಮ್ಮ ಲಗ್ನವು ಮೇಘಶ್ಯಾಮನೊಡನೆ ಆಗಬೇಕಾಗಿತ್ತಷ್ಟೇ? ಆದರೆ ಆತನು ಈಗ ಜಗತ್ತಿನಲ್ಲಿ ಇಲ್ಲದಂತಾಗಿರುವನು.

ಮನೋರಮೆ--ಹೀಗಾಗದಿದ್ದರೆ ನಾನೆಲ್ಲಿ ಇಷ್ಟುದಿವಸ ಬದುಕುತ್ತಿದ್ದೆನು?''

ತರುಣ—(ಆಶ್ಚರ್ಯದಿಂದ) ನಿಮ್ಮ ಮಾತಿನ ಅರ್ಥವೇನು?

ಮನೋರಮೆ—ಕಾರಣವಿಷ್ಟೇ; ಮೇಘಶ್ಯಾಮನು ದುರ್ನಡತೆಯುವನಿದ್ದದರಿಂದ ಅವನೊಡನೆ ಲಗ್ನವಾಗಲಿಕ್ಕೆ ನನ್ನ ಇಚ್ಛೆಯಿದ್ದಿಲ್ಲ; ಆತನು ರಾಧೆಯೆಂಬ ಕುಟಿಲೆಯ ಪ್ರೇಮಕ್ಕೆ ಪಾತ್ರನಾಗಿದ್ದನು. ಅದರಿಂದ ಅವನ ಸಂಗಡ ನನ್ನ ಲಗ್ನವಾಗಿದ್ದರೆ, ನನಗೆ ಆತ್ಮಹತ್ಯೆಯನ್ನು ಮಾಡಿಕೊಳ್ಳುವ ಪ್ರಸಂಗವು ಬರುತ್ತಿತ್ತು. ಆ ಪಾಪದಿಂದ ಈಗ ನಾನು ಮುಕ್ತಳಾಗಿರುವೆನು.

ತರುಣ--(ಚಕಿತನಾಗಿ) ಇದೇನು ಮೇಘಶ್ಯಾಮನ ಮೇಲೆ ನಿಮ್ಮ ಪ್ರೀತಿಯುದ್ದಿಲ್ಲವೇ?

ಮನೋರಮೆ—ಇದ್ದಿಲ್ಲ.

ತರುಣ—ಈಗ ನೀವು ನನ್ನೊಡನೆ...........

ಮುಂದೆ ಮಾತಾಡುವ ಧೈರ್ಯವು ಅವನಿಗಾಗಲಿಲ್ಲ. ಅವನ ಸಂಕೋಚ ಭಾವವನ್ನು ತಿಳಿದು, ಮನೋರಮೆಯು—ಮಾತಾಡಿರಿ-ಮಾತಾಡಿರಿ; ಜಳಜಳ ಮಾತಾಡಿರಿ! ನನ್ನೊಡನೆ ಲಗ್ನವನ್ನು ಇಚ್ಛಿಸುವಿರಾ? ಎಂದಳು

ಆಕೆಯ ಈ ಮಾತುಗಳನ್ನು ಕೇಳಿದ ಕೂಡಲೆ ಆ ಶ್ಯಾಮಾಂ

ಧನು ಆನಂದಪರವಶನಾಗಿ ಒಮ್ಮೆಲೆ ಎದ್ದುನಿಂತನು; ಮತ್ತು ಮನೋರಮೆಯ ಪಾದಗಳ ಮೇಲೆ ಬಿದ್ದು—ಸುಂದರೀ, ಇದೇ ನನ್ನ ಇಚ್ಛೆಯು! ನೀನು ನನ್ನ ಹೆಂತಿಯಡಾಗುವಿಯಾ?

ಮನೋರಮೆ—(ದೂರಸರಿದು) ಶಾಬಾಸ್! ಇಷ್ಟರ ಸಲುವಾಗಿ ಎಷ್ಟು ಪೇಚಾಡುತ್ತಿರುವಿರಲ್ಲ? ಲಗ್ನ ಮಾಡಿಕೊಳ್ಳುವದಕ್ಕಾಗಿಯೇ ನನ್ನನ್ನು ಕದ್ದುಕೊಂಡು ಬಂದಿರೇನು! ಛೀ; ಛೀ; ಬಹಳ ಶ್ರಮ ತಕ್ಕೊಂಡಿರಿ; ಹೀಗೆ ಮಾಡುವದಕ್ಕಿಂತ ನಮ್ಮ ಅಣ್ಣಂದಿರನ್ನು ಕೇಳಿದ್ದರೆ, ಸಹಜವಾಗಿ ನಿಮ್ಮ ಕೆಲಸವಾಗುತ್ತಿತ್ತಲ್ಲವೇ?

ತರುಣ—ನೀವನ್ನುವದು ನಿಜ; ಆದರೆ ನಿಮ್ಮ ಮನೆಯಲ್ಲಿ ಗಂಡಸರೆನ್ನುವವದು ಯಾರಿರುವರು? ಹಿರಿಯಣ್ಣನು ಓಡಿಹೋದನು; ನಡುವಿನವನು ಕಾರಾಗೃಹವನ್ನು ಹಿಡಿದನು; ಕಡೆಯುವರಿಬ್ಬರು ದೇಶತ್ಯಾಗ ಮಾಡಿದರು. ಪ್ರಿಯೇ ಇಂಥ ಸ್ಥಿತಿಯಲ್ಲಿ ನಿನ್ನ ಲಗ್ನದ ಉಸಾಬರಿಯನ್ನು ಯಾರು ಮಾಡುವರು? ಆದ್ದರಿಂದ ನಿನ್ನನ್ನು ಕದ್ದೇ ತರಬೇಕಾಯಿತು. ಈ ಬಗ್ಗೆ ನನ್ನನ್ನು ಕ್ಷಮಿಸು.

ಮನೋರಮೆ—ಕ್ಷಮೆಯ ಶಬ್ದವೇ? ಅನಾಯಾಸವಾಗಿ ನಿಮ್ಮಂಥ ಸುಂದರ ಪತಿಯು ಗಂಟು ಬಿದ್ದದ್ದು ನನ್ನ ಸುದೈವವೆಂತಲೇ ತಿಳಿಯುವೆನು. ಆದರೆ ವಿವಾಹ ಮುಹೂರ್ತವನ್ನು ಎಂದು ನಿಶ್ಚಯಿಸಿರುವಿರಿ?

ತರುಣ—ಸುಂದರೀ ನಿನ್ನ ಸಮ್ಮತಿಯಿಲ್ಲದೆ ಅದನ್ನು ಹ್ಯಾಗೆ ನಿಶ್ಚಯಿಸಲಿಕ್ಕೆ ಬಂದೀತು? ಇಂದು ಅಂದರೆ ಇಂದೇ; ನಾಳೆಯೆಂದರೆ ನಾಳೆಯೇ.

ಮನೋರಮೆ—ನಿಮ್ಮ ವಿಚಾರವು ನನಗೆ ಸಮ್ಮತವಿರುತ್ತದೆ. ನಿಮ್ಮ ಸುಂದರ ರೂಪವನ್ನು ನೋಡಿದ ಕೂಡಲೆ ನನ್ನ ಮನಸ್ಸು ಪ್ರಫುಲ್ಲಿತವಾಗಿರುತ್ತದೆ. ನನ್ನನ್ನು ನೀವು ಬುದ್ಧಿಪೂರ್ವಕವಾಗಿ

ಹರಣಮಾಡಿಕೊಂಡು ಬಂದದ್ದರಿಂದ ನನ್ನ ಮೇಲೆ ನಿಮ್ಮ ಸಂಪೂರ್ಣ ಪ್ರೇಮವಿರುತ್ತವೆಂಬದನ್ನು ಹೇಳಲಿಕ್ಕೇ ಬೇಡ;

ತರುಣ—ಪ್ರಿಯೇ; ನಿನ್ನ ಮೇಲೆ ಇರುವ ನನ್ನ ಪ್ರೇಮವನ್ನು ವರ್ಣಿಸಲಿಕ್ಕೆ ಶಬ್ದಗಳಲ್ಲಿ ಸಹ ಸಾಮರ್ಥ್ಯವಿರಲಾರದು. ಆದರೂ ನೀನು ನನ್ನ ಪ್ರೇಮವನ್ನು ಬೇಕಾದ ಹಾಗೆ ಪರೀಕ್ಷಿಸಬಹುದು.

ಮನೋರಮೆ—ಪ್ರೇಮ ಪರೀಕ್ಷೆಯನ್ನು ಏನು ಮಾಡುವದು? ಆದರೂ ಒಂದೆರಡು ಮಾತುಗಳನ್ನು ಮೊದಲು ಗೊತ್ತು ಮಾಡಿಕೊಳ್ಳುವದು ಅವಶ್ಯವಿರುವದು.

ತರುಣ—ಅವು ಯಾವ ಮಾತುಗಳು? ಮೊದಲು ಹೇಳು-ಹೇಳು!

ಮನೋರಮೆ—ಒಂದನೆಯ ಮಾತು ನಾನು ಹೀಗೆಯೇ ಎಷ್ಟು ದಿವಸ ಸೆರೆಯಲ್ಲಿರಬೇಕು?

ತರುಣ—ನಮ್ಮಿಬ್ಬರ ಲಗ್ನವಾಗುವ ವರೆಗೆ.

ಮನೋರಮೆ—ಆ ಬಳಿಕ?

ತರುಣ—ನಿನ್ನ ಆಪ್ತೇಷ್ಟರಿಗೆ ಬೇಕಾದ ಹಾಗೆ ಭೆಟ್ಟಿಯಾಗಬಹುದು. ಮತ್ತು ನನ್ನ ಪ್ರಾಣದ ಮೇಲೆ ಸ್ವಾಮಿತ್ವವನ್ನು ನಡಿಸಬಹುದು.

ಮನೋರಮೆ—ಎರಡನೆಯ ಮಾತು ಮುಂದೆ ನಾನು ಇದೇ ಮನೆಯಲ್ಲಿರಬೇಕಾಗುವದೇನು?

ತರುಣ—ಹೌದು, ಈ ಮನೆಯೆಂದರೆ ಸಾಮಾನ್ಯವಿಲ್ಲ; ಇದು ಒಂದು ವಿಶಿಷ್ಟ ಪದ್ಧತಿಯಿಂದ ಕಟ್ಟಲ್ಪಟ್ಟಿರುವದು. ಇದಕ್ಕೆ ಕಳ ಸೂತ್ರಿಯ ಮನೆಯೆನ್ನುವರು. ಇದರ ರಹಸ್ಯವು ನಿನಗೆ ತಿಳಿದರೆ ಈ ಮನೆಯನ್ನು ಬಿಟ್ಟು ಹೋಗಲಿಕ್ಕೆ ನೀನು ಒಪ್ಪಲಿಕ್ಕಿಲ್ಲ!

ಮನೋರಮೆ—ಹಾಗಾದರೆ ಈ ಮನೆಯ ರಹಸ್ಯವನ್ನು ನನಗೆ ತಿಳಿಸಿ ಕೊಡುವಿರಾ?

ಮನೋರಮೆಯ ಮುದ್ದುಮಾತುಗಳಿಂದ ತರುಣನು ಮೈಮರೆತು ಹೋಗಿದ್ದನು. ಅವನು ಆಕೆಯ ಮೇಲೆ ವಿಶ್ವಾಸವಿಟ್ಟು ಮಾತಾಡ ತೊಡಗಿದ್ದನು. ಆ ಪ್ರೇಮದ ಭರದಲ್ಲಿ ಅವನು ರಹಸ್ಯವನ್ನು ಹೇಳತಕ್ಕವನೇ; ಆದರೆ ಅವನು ಸ್ವಲ್ಪ ಶುದ್ಧಿಯಮೇಲೆ ಬಂದು ತಾನಾಗಿಯೇ ತನ್ನ ಮೃತ್ಯುವನ್ನು ತಂದುಕೊಳ್ಳಲಿಲ್ಲ; ಆಗ ಅವನು—

ತರುಣ—ಲಗ್ನವಾದಹೊರತು ಈ ಮನೆಯ ರಹಸ್ಯವು ನಿನಗೆ ತಿಳಿಯಲಾರದು.

ಮನೋರಮೆ—ಹಾಗೇ ಆಗಲಿ; ನಿಮ್ಮ ಇಷ್ಟ; ಆದರೆ ಇನ್ನು ಆರು ತಿಂಗಳವರೆಗೆ ಮಾತ್ರ ಈ ದಿವಾಣಖಾನೆಯ ಸನಿಯಕ್ಕೆ ಸಹ ಬರಬೇಡಿರಿ. ಈ ಅವಧಿಯಲ್ಲಿ ನನ್ನ-ನಿಮ್ಮ ಪ್ರೇಮಪರೀಕ್ಷೆಯಾಗಬೇಕಾಗಿರುತ್ತದೆ. ಆರು ತಿಂಗಳು ತುಂಬಿದ ಮರುದಿವಸವೇ ನಾನು ನಿಮ್ಮೊಡನೆ ಲಗ್ನವಾಗುವೆನು. ಅಷ್ಟರಲ್ಲಿ ಗಡಿಬಿಡಿ ಮಾಡಿದರೆ ನಿಮ್ಮ ಮಾತು ನಡೆಯುಗೊಡಲಿಕ್ಕಿಲ್ಲ! ಇಷ್ಟೇ ಅಲ್ಲ. ನಾನು ಪ್ರಾಣವನ್ನು ಸಹ ಇಡಲಿಕ್ಕಿಲ್ಲ; ಮತ್ತು ನಿಮ್ಮ ಯಾವ ದುಷ್ಟವಾಸನೆಗಳೂ ಪೂರ್ಣವಾಗಲಿಕ್ಕಿಲ್ಲ.''

ಮನೋರಮೆಯ ಈ ನಿರ್ಧಾರದ ಮಾತುಗಳಿಂದ ತರುಣನು ಬೆದರಿದನು. ಅವನು ಆಕೆಯನ್ನು ರಮ್ಮಿಸುವದರ ಸಲುವಾಗಿ—ಪ್ರಿಯೇ, ನಿನ್ನ ಆಜ್ಞೆಯನ್ನು ನಾನು ಶಿರಸಾವಹಿಸಿ ಕೇಳುವೆನು. ನೀನು ಗಾಬರಿಯಾಗುವ ಕಾರಣವಿಲ್ಲ; ಆದರೆ ಈ ಸ್ಟ್ಯಾಂಪಿನ ಮೇಲೆ ಈ ಸ್ಥಳದಲ್ಲಿ ನಿನ್ನ ಸಹಿಯನ್ನು ಮಾಡಿ ಕೊಡು, ಎಂದು ನುಡಿದು, ಒಂದು ಸ್ಟ್ಯಾಂಪನ್ನು ಕೊಟ್ಟನು.

ಮನೋರಮೆ—(ಸ್ಟಾಂಪನ್ನು ತಿರುವಿನೋಡಿ) ಇದೇನು ಕೋರಾ ಸ್ಟಾಂಪವಿರುತ್ತದಲ್ಲಾ? ಇದರ ಮೇಲೆ ನಾನು ಹ್ಯಾಗೆ ಸಹಿಮಾಡಲಿ?

ತರುಣ—ಸಹಿಮಾಡಲಿಕ್ಕೆ ಯಾವ ಸಂಶಯುವನ್ನೂ ಮನಸ್ಸಿನಲ್ಲಿ ತರುವ ಕಾರಣವಿಲ್ಲ.

ಮನೋರಮೆ—ನಿಜ. ಏನೂ ಬರೆಯದಿದ್ದ ಕಾಗದದಮೇಲೆ ನಾನು ಸಹಿಮಾಡಲಾರೆನು

ತರುಣನು ಸಹಿಮಾಡಿಸಲಿಕ್ಕೆ ವಿಶ್ವಪ್ರಯತ್ನ ಮಾಡಿದನು. ಅದರಿಂದ ಪ್ರಯೋಜನವಾಗಲಿಲ್ಲ ಕಡೆಗೆ ಅವನು ನಿರಾಶನಾಗಿ— "ನಿಮ್ಮ ಅಪ್ಪಣೆಯು ನನಗೆ ಮಾನ್ಯವದೆ. ನಿಮ್ಮ ಇಚ್ಛೆಯಂತೆ ೬ ತಿಂಗಳ ವರೆಗೆ ನಾನು ನಿಮ್ಮ ಸನಿಯಕ್ಕೆ ಬರುವದಿಲ್ಲ. ಪ್ರಸಂಗ ಬಂದರೆ ನಿಮ್ಮ ಸಮ್ಮತಿಯನ್ನು ಪಡೆದು ಬರುವೆನು. ನಿಮಗೆ ಏನಾದರೂ ತೊಂದರೆಯಾದರೆ ಪತ್ರಬರೆದು ಮೇಲಿನ ಕೋಣೆಯಲ್ಲಿ ಚಲ್ಲಿರಿ. ಅಂದರೆ ಕೂಡಲೆ ವ್ಯವಸ್ಥೆಯಾಗುವದು." ಎಂದು ನುಡಿದು, ಅಲ್ಲಿಂದ ಹೊರಟು ಹೋದನು. ಬಳಿಕ ಮನೋರಮೆಯು ಉಸಿರುಗಳೆದು ನಡೆದ ಸಂಗತಿಯನ್ನೆಲ್ಲ ಆಲೋಚಿಸುತ್ತ ಪಲ್ಲಂಗದ ಮೇಲೆ ಅಡ್ಡಾದಳು.

---

## [ 13 ]

ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ಮನೋರಮೆಯು ಅಡ್ಡಾಗಲು, ಅವಳಿಗೆ ಸ್ವಲ್ಪ ಜಂಪುಬರಹತ್ತಿತು. ಅಷ್ಟರಲ್ಲಿ ಅವಳಿಗೆ ಎಲ್ಲಿಂದಲೋ ಅಳುವ ಸ್ವರವು ಕೇಳಬರತೊಡಗಿತು. ಆಗ ಅವಳು ಕಣ್ಣು ಒರಿಸಿಕೊಂಡು ಎದ್ದು ಕುಳಿತು, ಆ ಸ್ವರವು ಯಾವ ಕಡೆಯದೆಂಬದನ್ನು ಆಲಿಸತೊಡಗಿದಳು. ತಾನು ಕುಳಿತಿದ್ದ ಕೋಣೆಯ ಕೆಳ

ಭಾಗದಲ್ಲಿ ಯಾರೋ ಅಳುತ್ತಿರುವರೆಂದು ಅವಳು ಕಂಡುಹಿಡಿದಳು. ಬಳಿಕ ಅವಳು ಕೋಣೆಯ ನೆಲಕ್ಕೆ ಕಿವಿಹಚ್ಚಿದಳು ಸ್ವರವು ಹೆಚ್ಚು ಸ್ಪಷ್ಟವಾಗಿ ಕೇಳಿಸಿತು. ಕೆಳಗಿನ ಮನೆಯಲ್ಲಿ ತನ್ನಂತೆ ಯಾರಾದರೂ ಸೆರೆಯಿರಬಹುದೆಂದು ಅವಳು ತರ್ಕಿಸಿದಳು. ಆಗ ಅವಳು ಕೋಣೆ ಯಲ್ಲೆಲ್ಲ ತಿರುಗಾಡಿ ಅಲ್ಲಲ್ಲಿ ನೆಲಕ್ಕೆ ಕಿವಿಯಾನಿಸಿ ಕೇಳುವದನ್ನು ನಡೆ ಯಿಸಿರಲು, ಒಂದು ಮೂಲೆಯಲ್ಲಿ ಅವಳು ಒಂದು ಮಹತ್ವದ ಸಂಗತಿಯನ್ನು ಕಂಡುಹಿಡಿದಳು. ಕೋಣೆಯ ನೆಲಕ್ಕೆ ಸಂಗಮರವ ರಿಯ ತುಂಡುಗಳ ಫರಸುಮಾಡಿದ್ದು, ಆ ಮೂಲೆಯಲ್ಲಿ ಮಾತ್ರ ಒಂದು ಕಟ್ಟಿಗೆಯ ತುಂಡು ನೆಲಕ್ಕೆ ಸರಿಯಾಗಿ ಕೂಡಿಸಲ್ಪಟ್ಟಿತ್ತು. ಆಗ ಮನೋರಮೆಗೆ ಆ ಮನೆಯ ಸಮಗ್ರಸೂತ್ರವು ಕೈಸೇರಿದಷ್ಟು ಆನಂದವಾಯಿತು ಅವಳು ಆ ಕಟ್ಟಿಗೆಯ ತುಂಡನ್ನು ಮತ್ತಿಷ್ಟು ನಿರೀಕ್ಷಿಸಲು ಅದರ ಒಂದು ಮೂಲೆಯಲ್ಲಿ ಒಂದು ಸೂಕ್ಷ್ಮ ಬೆಣೆಯಿ ದ್ದಂತೆ ತಿಳಿಯಿತು. ಅವಳು ಬೆಣೆಯನ್ನು ಒತ್ತಲು ಕಟ್ಟಿಗೆಯ ತುಂಡು ಕೆಳಕ್ಕೆ ಸರಿದು ಕೆಳಮನೆಗೆ ಹೋಗುವ ಪಾವಟಿಗೆಗಳು ಕಾಣಿಸಿದವು. ಈ ವಿಚಿತ್ರಪ್ರಕಾರವನ್ನು ಕಂಡು ಮನೋರಮೆಯು ಕ್ಷಣಹೊತ್ತು ದಂಗುಬಡೆದು ನಿಂತಳು. ಆದರೂ ಅವಳು ಧೈರ್ಯ ವನ್ನು ತಂದುಕೊಂಡು ಕೈಯಲ್ಲಿ ದೀಪವನ್ನು ತಕ್ಕೊಂಡು ಸರಸರ ಪಾವಟಿಗೆಗಳನ್ನಿಳಿದು ಕೆಳಗಿನ ಕೋಣೆಯಲ್ಲಿ ಹೋದಳು. ಅಲ್ಲಿ ಬೇಡಿಗಳಿಂದ ಪ್ರತಿಬಂಧಿಸಲ್ಪಟ್ಟಿದ್ದ ಒಬ್ಬ ಮನುಷ್ಯನು ಆಕೆಯ ಕಣ್ಣಿಗೆ ಬಿದ್ದನು. ಅವರಿಬ್ಬರ ದೃಷ್ಟಿಗಳು ಪರಸ್ಪರರಮೇಲೆ ಬೀಳಲು, ಅವರಿಬ್ಬರಲ್ಲಿಯೂ ಆಶ್ಚರ್ಯ-ಭಯಗಳುಂಟಾಗಿ ಇಬ್ಬರ ಮುಖದಿಂದಲೂ ಆ ಬಗೆಯ ಉದ್ಗಾರಗಳು ಹೊರಟವು. ಕೂಡಲೆ ಮನೋರಮೆಯು ಎಚ್ಚತ್ತು ತನ್ನ ಕೈಬೆರಳ ಸನ್ನೆಯಿಂದ ಆ ಸೆರೆ ಯಾಳನ್ನು ಸುಮ್ಮನಿರಿಸಿ ಅವನ ಹತ್ತರ ಹೋಗಿ ಮೆಲ್ಲಗೆ—"ಗಾಬ

ರಿಯಾಗಬೇಡಿರಿ, ನಾನು ಬೇಗನೆ ನಿಮ್ಮನ್ನು ಇಲ್ಲಿಂದ ಬಿಡುಗಡೆ ಮಾಡುವೆನು; ಆದರೆ ನೀವು ಇಲ್ಲಿ ಎಷ್ಟು ದಿವಸಗಳಿಂದ ಸೆರೆಯಾಳಾಗಿರುವಿರಿ?'' ಎಂದು ನುಡಿದಳು. ಆಗ ಆ ಮನುಷ್ಯನು—''ಯಾವ ದಿವಸ ನಿನ್ನೊಡನೆ ಲಗ್ನವಾಗಬೇಕಾಗಿತ್ತೋ ಆ ದಿವಸದಿಂದ'' ಎಂದು ಉತ್ತರ ಕೊಟ್ಟನು.

ಮನೋರಮೆ ಹಾಗೂ ಆ ಸೆರೆಯಾಳಿನ ಈ ಸಂಭಾಷಣದಿಂದ ನಮ್ಮ ವಾಚಕರು ಆ ಮನುಷ್ಯನು ಮೇಘಶ್ಯಾಮನೆಂದು ತರ್ಕಿಸಿರಬಹುದು. ಆತನ ಮಾತನ್ನು ಕೇಳಿ ಮನೋರಮೆಯು—

ಮನೋರಮೆ—''ನಿಮ್ಮನ್ನು ಯಾರು ಸೆರೆಯಲ್ಲಿರಿಸಿರುವರೆಂಬದು ನಿಮಗೇನಾದರು ಗೊತ್ತಾಗಿರುವದೇನು?''

ಮೇಘಶ್ಯಾಮ ''ನನ್ನನ್ನು ಸೆರೆಯಲ್ಲಿರಿಸಿದ ಹಾಗು ನನಗೆ ಪರಿಪರಿಯಿಂದ ದುಃಖಗಳನ್ನು ಕೊಟ್ಟು ನನ್ನನ್ನು ಕೊಲ್ಲಲಿಚ್ಛಿಸುವ ಆ ನರಾಧಮನು ಯಾರೆಂಬದನ್ನು ನಾನು ಗುರ್ತಿಸಲಾರೆನು, ಆದರೆ ನೀನು ಇಲ್ಲಿಗೆ ಹ್ಯಾಗೆ ಬಂದೆ?''

ಮನೋರಮೆ—ನಾನಾದರೂ ನಿಮ್ಮಂತೆ ಸೆರೆಯಾಳಾಗಿರುತ್ತೇನೆ, ಆದರೆ ನನ್ನ ನಿಮ್ಮ ಸ್ಥಿತಿಯಲ್ಲಿ ಮಾತ್ರ ಬಹಳ ಅಭ್ಯಂತರವುಂಟು. ನೀವು ಅನುಭವಿಸುವ ಕಷ್ಟಗಳು ನನಗಿರುವದಿಲ್ಲ. ಆ ಚಾಂಡಾಲನು ನನ್ನನ್ನು ಲಗ್ನ ಮಾಡಿಕೊಳ್ಳುವ ಇಚ್ಛೆಯಿಂದ ನನಗೆ ಬಹಳ ಅನುಕೂಲ ಮಾಡಿಕೊಟ್ಟಿರುವನು.

ಮೇಘಶ್ಯಾಮ (ಉಸಿರುಬಿಟ್ಟು)—ಅಂತೂ ನೀನು ಅವನೊಡನೆ ಲಗ್ನವಾಗಬೇಕೆಂದು ಮಾಡಿರುವಿಯಷ್ಟೇ?

ಮನೋರಮೆ (ಖಿನ್ನಮನಸ್ಸಿನಿಂದ)—ಮಹಾರಾಜ, ಇಂಥ ವಿಚಾರಗಳು ನಿಮ್ಮಲ್ಲಿ ಬಂದದ್ದಕ್ಕೆ ನನಗೆ ಬಹಳ ದುಃಖವಾಗುತ್ತದೆ. ಆ ದುಷ್ಟನ ಸಂಗಡ ನಾನು ವಿನಾಶವನ್ನು ಇಚ್ಛಿಸುವದಿಲ್ಲ; ಆದರೆ

ನಮ್ಮ ಬಿಡುಗಡೆಯಾಗುವ ವರೆಗೆ ಮಾತ್ರ ಅವನಂತೆ ಮಾತಾಡಬೇಕಾಗಿದೆ. ಇದರಲ್ಲಿ ಅಪರಾಧವಿಲ್ಲವಷ್ಟೇ? ನಿಮ್ಮನ್ನು ಅವನು ಸೆರೆಯಿರಿಸುವ ಕಾರಣವೇನು?

ಮೇಘಶ್ಯಾಮ—ಆತನು ನನ್ನನ್ನು ಯಾಕೆ ಸೆರೆಯಿರಿಸಿರುವನೆಂಬದರ ನಿಜವಾದ ಕಾರಣವು ನನಗೆ ತಿಳಿಯದಿದ್ದರೂ ಅವನ ಮನಸ್ಸಿನಲ್ಲಿದ್ದ ವಿಷಯವನ್ನು ನಾನು ಕಂಡು ಹಿಡಿದಿರುತ್ತೇನೆ. ಆತನು ನನ್ನನ್ನು ಕೊಂದು ನನ್ನ ಆಸ್ತಿಯನ್ನು ಅಪಹರಿಸುವ ಯೋಚನೆಯನ್ನು ಮಾಡಿದಂತೆ ಕಾಣುತ್ತದೆ. ಯಾಕಂದರೆ ಅವನು ಒಂದು ಹೊಸ ಸ್ಟಾಂಪನ್ನು ತಂದು ಅದರ ಮೇಲೆ ನನ್ನ ಸಹಿ ತಕ್ಕೊಳ್ಳುವದಕ್ಕಾಗಿ ಬಹಳ ಆಗ್ರಹ ಮಾಡುತ್ತಾನೆ; ಮತ್ತು ಸ್ಟಾಂಪಿನ ಮೇಲೆ ಸಹಿ ಮಾಡಿದೆಯೆಂದರೆ ನಿನ್ನ ಬಿಡುಗಡೆ ಮಾಡುತ್ತೇನೆಂದು ಅನ್ನುತ್ತಾನೆ.

ಮನೋರಮೆ (ಗಾಬರಿಯಾಗಿ)—ತಾವು ಇನ್ನೂ ಆ ನೀಚನಿಗೆ ಸಹಿ ಕೊಟ್ಟಿಲ್ಲವಷ್ಟೇ?

ಮೇಘಶ್ಯಾಮ—ಇಲ್ಲ; ನನ್ನ ಶರೀರದಲ್ಲಿ ಜೀವವಿರುವ ವರೆಗೆ ನಾನು ಆ ಚಾಂಡಾಲನಿಗೆ ಸಹಿಯನ್ನು ಕೊಡಲಿಕ್ಕಿಲ್ಲ.

ಮನೋರಮೆ—ಆ ನೀಚನು ನನ್ನ ಕಡೆಯಿಂದಲೂ ಸಹಿ ಮಾಡಿಸಿಕೊಳ್ಳುವದಕ್ಕಾಗಿ ಒಂದು ಕೋರಾ ಸ್ಟಾಂಪು ತಂದಿದ್ದನು. ನಾನು ಅವನಿಗೆ ಏನೂ ಹತ್ತಗೊಡಲಿಲ್ಲ. ನೀವು ತರ್ಕಿಸಿದಂತೆ ಆ ನೀಚನು ಏನೋ ಮನಸ್ಸಿನಲ್ಲಿ ಮುಂಡಿಗೆಯನ್ನು ಮಾಡಹತ್ತಿದ್ದಾನೆ.

ಮೇಘಶ್ಯಾಮ—ಮನೋರಮೆ, ಆ ಸಹಿಯ ಮಾತು ಒತ್ತಟ್ಟಗಿರಲಿ; ಇನ್ನು ಮುಂದೆ ನನ್ನ ಆಯುಷ್ಯವು ತೀರಿತೆಂದು ತಿಳಿ; ಯಾಕೆಂದರೆ ಆ ರಾಕ್ಷಸನು ನನಗೆ ಆಹಾರವನ್ನೇ ಕೊಡುವದಿಲ್ಲ. ಮೂರುದಿವಸಕ್ಕೊಂದುಸಲ ಒಬ್ಬ ಮನುಷ್ಯನುಬಂದು ನನಗೆ ಅರ್ಧ

ಸೇರು ಕಡಲೆಯನ್ನು ಮಾತ್ರ ಕೊಟ್ಟು ಹೋಗುತ್ತಾನೆ ಇದೊಂದು ಮಗಿ ನೀರು ಅರ್ಧಸೇರು ಕಡಲೆಯಿಂದ ನಾನು ಮೂರು ದಿವಸಗಳ ವರೆಗೆ ಜೀವಾ ಹಿಡಿಯಬೇಕು; ಹಾಯ್! ಈ ಪರಿ ನನ್ನನ್ನು ಗೋಳಾಡಿಸುವದಕ್ಕಿಂತ ಆ ನೀಚನು ನನ್ನನ್ನು ಒಮ್ಮೆ ಈ ದೇಹದಿಂದ ಮುಕ್ತನನ್ನಾಗಿಮಾಡಿಬಿಡಬಾರದೆ? ಎಂದು ಕಣ್ಣಿಗೆ ನೀರು ತಂದನು.

ಮನೋರಮೆ—(ದುಃಖಪಟ್ಟು)ಮಹಾರಾಜ, ಇನ್ನು ಮುಂದೆ ತಾವು ಹೀಗೆ ಅಳಬಾರದು. ಈ ನನ್ನ ನಿಮ್ಮ ಭೆಟ್ಟಿಯಲ್ಲಿ ಏನೋ ವಿಲಕ್ಷಣ ಯೋಗವಿದ್ದಂತೆ ಕಾಣುತ್ತದೆ ನಾನು ನಿಮಗೆ ದಿನಾಲು ಆಹಾರವನ್ನು ಒದಗಿಸಿ ಕೊಡುವೆನು. ಆದರೆ ಆ ಮನುಷ್ಯನು ಯಾವಾಗ್ಗೆ ಮತ್ತು ಯಾವ ಮಾರ್ಗದಿಂದ ಬರುವನು?

ಮೇಘಶ್ಯಾಮ—ಮೂರು ದಿವಸಕ್ಕೊಮ್ಮೆ ಮಧ್ಯಾಹ್ನದ ೨ ಗಂಟೆಗೆ ಬರುವನು. ಅವನು ಬರತಕ್ಕ ಮಾರ್ಗವು ಅಗೋ ಆ ಮೂಲೆಯಲ್ಲಿರುವ ಕಟ್ಟಿಗೆ ತುಂಡಿನಲ್ಲಿರುತ್ತದೆ; ಈ ಪ್ರಕಾರ ಮೇಘಶ್ಯಾಮನು ಮಾತನಾಡುತ್ತಿರಲು, ಮನೋರಮೆಯು ಆ ಕಟ್ಟಿಗೆಯ ತುಂಡಿನ ಬಳಿಗೆ ಹೋಗಿ ಅದರ ಬೆಣೆಯನ್ನು ಒತ್ತಿದಳು; ಕೂಡಲೆ ಅದು ಕೆಳಕ್ಕೆ ಹೋಯಿತು. ಆಗ ಆ ಧಿಟ್ಟೆಯು ಕೈಯಲ್ಲಿ ದೀಪವ ತಕ್ಕೊಂಡು ಕೆಳಗಿನ ಕೋಣೆಯಲ್ಲಿ ಹೋದಳು. [ಅಲ್ಲಿ ಹಲವು ಬಗೆಯ ಶಸ್ತ್ರಾಸ್ತ್ರಗಳಿದ್ದವು. ಬಿಲ್ಲು ಬಾಣಗಳಿದ್ದವು. ಮನೋರಮೆಯು ಆಶ್ಚರ್ಯಪಟ್ಟು ಅವುಗಳಲ್ಲಿ ಒಂದು ಖಡ್ಗವನ್ನೂ ಒಂದು ಧನುಸ್ಸನ್ನೂ ಎಷ್ಟೋ ಬಾಣಗಳನ್ನೂ ತಕ್ಕೊಂಡಳು ಮತ್ತು ಬೇಡಿಯನ್ನು ತೆಗೆಯುವ ಕೀಲಿಯ ಕೈಯನ್ನು ತಕ್ಕೊಂಡು ಮೇಲೆ ಬಂದು ಮೊದಲಿನಂತೆ ಬೆಣೆಯನ್ನು ಕೂಡಿಸಿದಳು. ಬಳಿಕ ಅವಳು ತಂದಿದ್ದ ಸಾಮಾನುಗಳನ್ನು ಮೇಘಶ್ಯಾಮನಿಗೆ ತೋರಿಸಿ ಅವನ ಬೇಡಿಯನ್ನು ತೆಗೆದಳು. ಶೃಂಖಲೆಯಿಂದ ಮುಕ್ತನಾಗಲು ಆತನು ಸಂಭ್ರಮಪಟ್ಟು

ಪ್ರಿಯೇ, ಎಂದು ಮನೋರಮೆಯನ್ನು ಆಲಿಂಗಿಸಿದನು. ಮತ್ತು "ನನ್ನ ಬಿಡುಗಡೆಗಾಗಿಯೇ ದೇವರು ನಿನ್ನನ್ನು ಕಳಿಸಿರುವನೆ"ಂದು ಉದ್ಗಾರ ತೆಗೆದನು. ಆಗ ಮನೋರಮೆಯು—ಇನ್ನು ಮುಂದೆ ನಾನು ನಿಮ್ಮ ಬಳಿಯಲ್ಲಿಯೇ ಇರುತ್ತೇನೆ. ಮೂರುದಿವಸಕ್ಕೊಮ್ಮೆ ಆ ಮನುಷ್ಯನು ಬರುವಾಗ ಮಾತ್ರ ನಿಮಗೆ ಬೇಡಿಯನ್ನು ಹಾಕಿ ಮೇಲೆ ಹೋಗುತ್ತೇನೆ. ಕದಾಚಿತ್ ನಾನೂ ನೀವೂ ಕೂಡಿ ಇದ್ದಾಗ ಯಾರಾದರೂಬಂದರೆ ಅವರನ್ನು ಈ ಖಡ್ಗದಿಂದ ಗೊತ್ತಿಗೆಹಚ್ಚೋಣ, ಮುಂದೆ ಏನು ಆಗುವದೋ ಆಗಲಿ; ಎಂದು ನುಡಿದು ಅವನನ್ನು ಮೇಲಿನ ಕೋಣೆಗೆ ಕರೆದೊಯ್ದು ಸಮಿಾಚೀನವಾದ ಉಪಾಹಾರ ಮಾಡಿಸಿದಳು. ಬಳಿಕ ಆಕೆಯು ಅವನನ್ನು ಕೆಳಗಿನ ಕೋಣೆಗೆ ಕಳಿಸಿ ತಾನು ಪಲ್ಲಂಗದ ಮೇಲೆ ಮಲಗಿಕೊಂಡಳು. ಈದಿನ ಆಕೆಯು ಪ್ರೀತಿಯಾದ್ದರಿಂದಲೂ ವಿಲಕ್ಷಣ ಯೋಗಾಯೋಗವು ಕೂಡಿ ಬಂದದ್ದರಿಂದಲೂ ಅವಳಿಗೆ ಬಹಳ ಹೊತ್ತಿನವರೆಗೆ ನಿದ್ದೆ ಹತ್ತಲಿಲ್ಲ.

---

## [ 14 ]

ಮರುದಿನ ಬೆಳ್ಳಿಗೆ ಬೆಳಗಾದ ಬಳಿಕ ಮನೋರಮೆಯು ಎದ್ದು ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ಸ್ನಾನ ಮಾಡಿದಳು. ಬಳಿಕ ಅವಳು ಮೋಹಶ್ಯಾಮನ ಬಳಿಗೆ ಹೋಗಿ ಅವನಿಗೆ ಬೇಡಿಯನ್ನುಹಾಕಿದಳು. ಯಾಕಂದರೆ ಈದಿನ ಆತನಿಗೆ ಕಾಳು ನೀರು ಕೊಡತಕ್ಕ ಮನುಷ್ಯನು ಬರತಕ್ಕವನಿದ್ದನು. ಆ ಮನುಷ್ಯನು ಬಂದು ಹೋದ ಬಳಿಕ ಬೇಡಿಯಿಂದ 'ಝಣ ಝಣ' ಸಪ್ಪಳ ಮಾಡಿದರೆ ನಾನು ನಿಮ್ಮನ್ನು ಮೇಲಕ್ಕೆ ಕರೆದೊಯ್ಯುತ್ತೇನೆ ಎಂದು ಹೇಳಿ ಆಕೆಯು ಮರಳಿ ತನ್ನ ಸ್ಥಳಕ್ಕೆ ಹೋಗಿ ರಾಮಾಯಣವನ್ನು ಓದುತ್ತ ಕುಳಿತಳು. ಅಷ್ಟರಲ್ಲಿ ಘಡಿಯಾರದಲ್ಲಿ ೧' ಬಡಿಯಿತು. ಕೂಡಲೆ ಮೋಹಶ್ಯಾಮನ ಬೇಡಿಯು

ಝಣ ಝಣವೆಂಬ ಸಪ್ಪಳವೂ ಕೇಳಿಸಿತು. ಆಗ ಅವಳು ರಾಮಾಯಣವನ್ನು ಕೆಳಗಿಟ್ಟು ಮೇಘಶ್ಯಾಮನ ಬಳಿಗೆ ಹೋಗಿ ಅವನನ್ನು ಮೇಲೆ ಕರೆತಂದು ಸ್ನಾನ ಮಾಡಿಸಿದಳು. ಅನ್ನಾನ್ನಗತಿಕನಾಗಿದ್ದ ಅವನು ಸುಗ್ರಾಸ ಭೋಜನ ಮಾಡಿ ಸಂತೃಪ್ತನಾದನು. ಮನೋರಮೆಯು ಊಟಮಾಡಿ ತಾಂಬೂಲವನ್ನು ಸವಿಯುತ್ತ ಗಂಡನ ಬಳಿಯಲ್ಲಿ ಕುಳಿತುಕೊಂಡಳು. ಇಂಥ ಸಾಹಸಿಯಾದ ಹೆಂಡತಿಯು ದೊರೆತದ್ದಕ್ಕೆ ಮೇಘಶ್ಯಾಮನು ಕೃತಜ್ಞತೆಯಿಂದ ನುಡಿದನೇನಂದರೆ—"ಪ್ರಿಯೆ, ನಾನು ಸೆರೆಯಲ್ಲಿದ್ದೇನೆಂಬದು ನಿಮಗೆ ಸ್ವಪ್ನದಲ್ಲಿ ಕೂಡಾ ಗೊತ್ತಿರಲಿಕ್ಕಿಲ್ಲವಷ್ಟೇ; ಹೀಗಿದ್ದು ನೀನು ನನ್ನ ವಿಷಯವಾಗಿ ವಹಿಸಿರುವ ಪ್ರೇಮಕ್ಕೆ ಪ್ರತಿಫಲರೂಪವಾಗಿಯೇ ದೇವರು ನನ್ನ ನಿನ್ನ ಸಂಘಟನವನ್ನು ಒದಗಿಸಿಕೊಟ್ಟಿರುವನು!!"

ಮನೋರಮೆ—ನೀವು ಆ ದಿವಸ (ಲಗ್ನದ ಮುನ್ನಾದಿವಸ) ರಾತ್ರಿಯಲ್ಲಿ ಒಮ್ಮಿಂದೊಮ್ಮೆ ಇಲ್ಲದಂತಾದಿರಷ್ಟೆ ಅದೇ ದಿವಸ ಭೋಲಾನ ಕೊಲೆಯಾದ್ದರಿಂದಲೂ ಕಂಕಣ ಕಟ್ಟಿದ್ದ ಒಂದು ಹಸ್ತವು ನಮಗೆ ಸಿಕ್ಕದ್ದರಿಂದಲೂ ನಿಮ್ಮ ವಿಷಯವಾಗಿ ದುಷ್ಟ ಸುದ್ದಿಯು ಹಬ್ಬಿತು. ರಾಧೆಗೂ ನಿಮಗೂ ಸಂಬಂಧವಿದ್ದು, ಆ ಸಂಬಂಧದಿಂದಲೇ ತ್ರಿವಿಕ್ರಮನು ಭೋಲಾನನ್ನೂ ನಿಮ್ಮನ್ನೂ ಕೊಲೆಮಾಡಿದನೆಂದು ಜನರು ಊಹಿಸಿದರು. ಪೋಲೀಸರು ತ್ರಿವಿಕ್ರಮನನ್ನು ಹಿಡಿಯಲಿಕ್ಕೆ ಪ್ರಯತ್ನಮಾಡಿದ್ದರಿಂದ ಆತನು ಓಡಿ ಹೋಗಿರುವನು, ಈಗ ನೀವು ಬದುಕಿರುವದರಿಂದಲೇ ತ್ರಿವಿಕ್ರಮನೂ ಬದುಕಬಹುದೆಂಬ ಆಶೆಯು ನನಗುಂಟಾಗಿರುತ್ತದೆ.

ಮೇಘಶ್ಯಾಮ—ಹಾಯ್, ಹಾಯ್ ಪ್ರಿಯೇ, ತ್ರಿವಿಕ್ರಮನ ಮೇಲೆ ಇಂಥ ಅನಿಷ್ಟ ಪ್ರಸಂಗವು ಬಂದಿರುವದೇ? ನಾನು ನೀಚನು; ರಾಧೆಯೊಡನೆ ರಮಿಸಿದ್ದರಿಂದ ಇಂಥ ಶಾಸನಕ್ಕೊಳಗಾದೆನು,

ದೇವರು ನ್ಯಾಯವಂತನು; ಪರಸ್ತ್ರೀಲಂಪಟನಾದ ನನಗೆ ಯೋಗ್ಯ ಶಾಸನವನ್ನು ಮಾಡಿರುವನು. ಪ್ರಿಯೇ ನನ್ನ ಅಪರಾಧವನ್ನು ಕ್ಷಮಿಸುವಿಯಾ?

ಮನೋರಮೆ—ಪ್ರಾಣನಾಥ, ಹೀಗೇನು ನುಡಿಯುವಿರಿ? ಇರಲಿ: ದೇವರು ಏನು ಏನು ಮಾಡಿಸುವನೋ ನೋಡೋಣ; ನೀವು ನಿಮ್ಮ ಕೋಣೆಗೆ ಹೋಗಿ ಮಲಗಿಕೊಳ್ಳಿರಿ. ನಾನು ಕೆಲವು ಸ್ಥಳಗಳನ್ನು ಪರೀಕ್ಷಿಸುವೆನು.

ಈ ಮೇರೆಗೆ ಅವರಿಬ್ಬರ ಸಂಭಾಷಣವಾದ ಬಳಿಕ ಮೋಕ್ಷಶ್ಯಾಮನು ತನ್ನ ಸ್ಥಳಕ್ಕೆ ಹೋಗಿ ನಿರ್ಭಯದಿಂದ ಮಲಗಿಕೊಂಡನು. ಯಾಕಂದರೆ ಇನ್ನು ಮೂರುದಿನಗಳ ವರೆಗೆ ಅವನ ಕೋಣೆಗೆ ಯಾರೂ ಸುಳಿಯುವ ಹಾಗಿದ್ದಿಲ್ಲ. ಇತ್ತ ಮನೋರಮೆಯು ಈ ದಿನ ರಾತ್ರಿಯಲ್ಲಿ ಯಾವ ಯಾವ ಸ್ಥಳಗಳನ್ನು ನೋಡಬೇಕೆಂದು ಯೋಚಿಸಹತ್ತಿದಳು. ಆ ದಿವಾಣಖಾನೆಯಲ್ಲಿ ಐದು ನಿಲುಗನ್ನಡಿಗಳು ನಿಲ್ಲಿಸಲ್ಪಟ್ಟಿದ್ದವೆಂದು ಹಿಂದೆಹೇಳಿದೆಯಷ್ಟೇ? ಆ ಪ್ರತಿಯೊಂದು ಕನ್ನಡಿಯ ಹಿಂಭಾಗದಲ್ಲಿ ಒಂದೊಂದು ಕೋಣೆಗೆ ಹೋಗುವ ಗುಪ್ತಮಾರ್ಗವಿದ್ದು ಅವು ಹಿಂದೆ ಹೇಳಿದಂತೆ ಒಂದೊಂದು ಕಟ್ಟಿಗೆಯ ತುಂಡಿನಿಂದ ಆಚ್ಛಾದಿಸಲ್ಪಟ್ಟಿದ್ದವು ಮನೋರಮೆಯು ಅವುಗಳನ್ನು ಸೂಕ್ಷ್ಮ ದೃಷ್ಟಿಯಿಂದ ನೋಡಿಕೊಂಡು ರಾತ್ರಿಯಲ್ಲಿ ತೆರೆಯುವದಕ್ಕೆ ಗುರ್ತಿಟ್ಟುಕೊಂಡಳು. ರಾತ್ರಿಯಲ್ಲಿ ಊಟವಾದ ಬಳಿಕ ಅವಳು ಒಂದು ಮೇಣಬತ್ತಿಯನ್ನೂ ದೀಪದ ಕಡ್ಡಿಯ ಪೆಟ್ಟಿಗೆಯನ್ನೂ ತಕ್ಕೊಂಡು ಮೆಲ್ಲಗೆ ಒಂದು ಕನ್ನಡಿಯನ್ನು ಸರಿಸಿ, ಅಲ್ಲಿದ್ದ ಕಟ್ಟಿಗೆಯ ತುಂಡಿನ ಬೆಣೆಯನ್ನು ಒತ್ತಿದಳು. ಕೂಡಲೆ ಅದು ಗೋಡೆಯಲ್ಲಿ ಒಳಸಿಕ್ಕು ಕೆಳಗಿನ ಕೋಣೆಗೆ ಹೋಗಲು ಮಾರ್ಗವನ್ನು ಬಿಟ್ಟುಕೊಟ್ಟಿತು! ಮನೋರಮೆಯು

ಧೈರ್ಯದಿಂದ ಮೆಟ್ಟಲವನ್ನಿಳಿದು ಕೋಣೆಯಲ್ಲಿ ಹೋಗಿ ಅಲ್ಲಿ ಯಾರಾದರೂ ಮನುಷ್ಯರಿರುವರೋ ಎಂಬದನ್ನು ಸೂಕ್ಷ್ಮವಾಗಿ ನಿರೀಕ್ಷಿಸಿದಳು; ಮನುಷ್ಯರ ಸುಳುವು ಕಾಣದ್ದರಿಂದ ಅವಳು ಮೆಲ್ಲಗೆ ಕಡ್ಡಿಯನ್ನು ಕೊರೆದು ದೀಪಹಚ್ಚಿದಳು. ಆ ದೀಪದ ಪ್ರಕಾಶವು ಕೋಣೆಯತುಂಬ ಬೆಳಗಿತು ಆಗ ಮನೋರಮೆಯು ಕೋಣೆಯಲ್ಲಿ ಏನು ವಿಶೇಷವೆಂದು ನೋಡಲು ಅಲ್ಲಿ ಏನೂ ಇದ್ದಿಲ್ಲ. ಆದರೆ ಒಂದು ಮೂಲೆಯಲ್ಲಿ ಕೆಳಗಿನ ಕೋಣೆಗೆ ಹೋಗಲಿಕ್ಕೆ ಅವಳಿಗೊಂದು ಮಾರ್ಗವು ಮಾತ್ರ ಕಂಡಿತು. ಅವಳು ಆ ಮಾರ್ಗದ ಬೆಣೆಯನ್ನು ಸರಿಸಲು ಅವಳು ಅಲ್ಲಿ ಕೂಡದಷ್ಟು ದುರ್ಗಂಧವಿಡಗಿತ್ತು. ಆ ದುರ್ಗಂಧದಿಂದ ಅವಳಿಗೆ ವಾಂತಿಯು ಕೂಡಾ ಆಯಿತು. ಆಗ ಅವಳು ಅದರ ಬೆಣೆಯನ್ನು ಪುನಃ ಮೊದಲಿನಂತೆ ಸರಿಸಿ ಮೇಲಿನ ಕೋಣೆಗೆ ಬಂದಳು. ಬಳಿಕ ಅವಳು ಎರಡನೆಯ ಕನ್ನಡಿಯ ಆಶ್ರಯಕ್ಕಿರುವ ಬೆಣೆಯನ್ನು ಸರಿಸಿ ಕೆಳಗಿಳಿದಳು. ಅಲ್ಲಿ ನಾನಾತರದ ಔಷಧಿಗಳು ಇದ್ದವು ಪ್ರತಿಯೊಂದು ಔಷಧಿಯ ಬಾಟ್ಲಿಯ ಮೇಲೆ ಹೆಸರುಗಳಿದ್ದದ್ದರಿಂದ ಅವುಗಳೆಲ್ಲವನ್ನೂ ಅವಳು ಬಿಡದೆ ಓದಿದಳು. ಅವುಗಳಲ್ಲಿ ಒಂದು ಸೀಸೆಯಲ್ಲಿ ಮನುಷ್ಯನನ್ನು ಮೂರ್ಛೆಗೊಳಿಸುವ ಔಷಧಿಯಿತ್ತು. ಮನೋರಮೆಯು ಕೂಡಲೆ ಆ ಸೀಸೆಯನ್ನು ತಕ್ಕೊಂಡು ಅದರೊಳಗಿನ ಎಲ್ಲ ಗುಳಿಗೆಗಳನ್ನು ಸುರುವಿಕೊಂಡಳು. ಬಳಿಕ ಅವಳು ಆ ಕೋಣೆಯ ದ್ವಾರವನ್ನು ಮೊದಲಿನಂತೆ ಮುಚ್ಚಿ ಮೂರನೆಯ ಕೋಣೆಯ ಕಡೆಗೆ ಹೊರಟಳು. ಅಲ್ಲಿ ಅವಳಿಗೆ ಬಹು ದೊಡ್ಡ ಸಂಗತಿಯ ಲಾಭವಾಯಿತು. ಆ ಕೋಣೆಯು ಆ ಮನೆಯ ಮುಖ್ಯಮನುಷ್ಯನ ಮುಖ್ಯ ಕೋಣೆಯಾಗಿದ್ದು ಅಲ್ಲಿ ಅವನ ಜೀವದಂತಿರುವ ಎಲ್ಲ ಕಾಗದ-ಪತ್ರಗಳಿದ್ದವು. ಮನೋರಮೆಯು ಬಹು ಸಂಭ್ರಮಪಟ್ಟು ಅವುಗಳನ್ನೆಲ್ಲ ತಿರುವಿಹಾಕಿದಳು. ಆಗ ಅವಳಿಗ

ತನ್ನ ಹಾಗು ಮೋಕ್ಷಶ್ಯಾಮನಿಂದ ಸಹಿ ಮಾಡಿಸಲಿಕ್ಕೆ ತಂದಿದ್ದ, ಕೋರಾ ಷ್ಟಾಂಪಗಳೂ ಅವುಗಳಲ್ಲಿ ಬರೆಯಬೇಕಾಗಿದ್ದ ಸಂಗತಿಯ ಮಸೂದೆಯ ಕಾಗದಗಳೂ ಡಾಯರಿಯೂ ಆ ಮನೆಯ ನಕಾಶವೂ ಸಿಕ್ಕವು; ಅವುಗಳನ್ನೆಲ್ಲ ವ್ಯವಸ್ಥೆಯಿಂದ ಸಂಗ್ರಹಿಸಿ ಆಕೆಯು ನಾಲ್ಕನೆಯ ಕೋಣೆಗೆ ಹೋದಳು. ಅಲ್ಲಿ ತರತದ ಬಿಲ್ಲು ಬಾಣ ಬತ್ತಳಿಕೆಗಳಿದ್ದವು. ಅವುಗಳಲ್ಲಿ ಮತ್ತೆ ಒಂದೆರಡು ಬಿಲ್ಲು ಬಾಣ ತಕ್ಕೊಂಡು ಅವಳು ಐದನೆಯ ಕೋಣೆಗೆ ಹೋದಳು. ಅಲ್ಲಿ ಬರವಣಿಗೆಯ ಸಾಧನ ಸಾಮುಗ್ರಿಗಳೂ ಅನೇಕ ವಿಷಯಗಳ ಮೇಲಿನ ಪುಸ್ತಕಗಳೂ ಇದ್ದವು. ಮನೋರಮೆಯು ಅಲ್ಲಿ ಏನೂ ತಕ್ಕೊಳ್ಳದೆ ತನ್ನ ಸ್ಥಳಕ್ಕೆ ಹೊರಟು ಬಂದಳು. ಆಕೆಯು ಇಷ್ಟೆಲ್ಲ ಕೆಲಸ ತೀರಿಸಿಕೊಂಡು ಮೇಲೆ ಬರುವಷ್ಟರಲ್ಲಿ ಬೆಳಗಿನ ಐದುಘಂಟೆಯ ಸಮಯವಾಗಿತ್ತು; ಆಗ ಅವಳು ಮಲಗಿಕೊಳ್ಳುವ ಯೋಚನೆಯನ್ನು ಮಾಡದೆ ತಂದ ಸಾಮಾನುಗಳನ್ನು ಬಚ್ಚಿಟ್ಟು ಪ್ರಾತರ್ವಿಧಿಗಳನ್ನು ತೀರಿಸಿ ಸ್ನಾನ ಮಾಡಿದಳು. ಮತ್ತು ಬೆಳಗಾಗುತ್ತಲೇ ಮೋಕ್ಷಶ್ಯಾಮನ ಕೋಣೆಗೆ ಹೋಗಿ ಅವನಿಗೆ ಎಲ್ಲ ಸಂಗತಿಯನ್ನು ನಿವೇದಿಸಿದಳು. ತನ್ನ ಭಾವೀ ಸತಿಯ ಈ ಅದ್ಭುತ ಸಾಹಸಕ್ಕೆ ತಲೆದೂಗಿ ಮೋಕ್ಷಶ್ಯಾಮನು ಉತ್ಸುಕತೆಯಿಂದ ಮೇಲೆ ಬಂದು ಅವುಗಳನ್ನು ಕಣ್ಣಾಮುಟ್ಟ ನೋಡಿ ಮನೋರಮೆಯ ಬೆನ್ನನ್ನು ಚಪ್ಪರಿಸಿದನು. ಈ ಎಲ್ಲ ಶೋಧದಿಂದ ಅವರಿಬ್ಬರಲ್ಲಿ ಆಶ್ಚರ್ಯ-ಭಯಗಳುಂಟಾದವು. ಆದರೂ ಮನೋರಮೆಯು ಅತ್ಯಂತ ಸಾಹಸಿಯಾದ್ದರಿಂದ—"ಒಂದೇ ದಿವಸದಲ್ಲಿ ಈ ಮನೆಯ ರಹಸ್ಯವನ್ನು ತಿಳಿದು ನಿಮ್ಮೊಡನೆ ಪಾರಾಗಿ ಹೋಗುವೆ" ನೆಂದು ಧೈರ್ಯವ ಹೇಳಿದಳು.

ಬಳಿಕ ಅವರಿಬ್ಬರು ತಮ್ಮ ಬಿಡುಗಡೆಯ ವಿಷಯವಾಗಿ ಬಹಳ ಹೊತ್ತಿನವರೆಗೆ ಚರ್ಚಿಸಿ ತಮ್ಮ ಆಪ್ತರ ಹೆಸರಿನಿಂದ ಪತ್ರ ಬರೆದು

ಬಾಣದ ಸಹಾಯದಿಂದ ಅದನ್ನು ಈ ಮನೆಯಿಂದ ಬಹುದೂರದಲ್ಲಿ ಚಲ್ಲಿಕೊಡಬೇಕೆಂದು ಗೊತ್ತು ಮಾಡಿದರು. ಆದರೆ ಯಾರ ಹೆಸರಿನಿಂದ ಮತ್ತು ಹ್ಯಾಗೆ ಬರೆಯಬೇಕೆಂಬ ಬಗ್ಗೆ ಅವರಲ್ಲಿ ಬಹಳ ಚರ್ಚೆಯಾಯಿತು. ವಾಸುದೇವರಾಯನು ಇಂಥಲ್ಲಿಯೇ ಇರುವನೆಂಬದು ಗೊತ್ತಿದ್ದಿಲ್ಲ; ಮಹಾದೇವ-ವಿಶ್ವನಾಥರು ಪರದೇಶಕ್ಕೆ ಹೊರಟು ಹೋಗಿದ್ದರು. ಆದ್ದರಿಂದ ಅವರಲ್ಲಿ ಯಾರ ಹೆಸರಿನಿಂದಲೂ ಪತ್ರ ಬರೆಯುವಹಾಗಿದ್ದಿಲ್ಲ. ಶಿವರಾಯನು ಮಾತ್ರ ಇಷ್ಟೊತ್ತಿಗೆ ಕಾರಾಗೃಹದಿಂದ ಮುಕ್ತನಾಗಿರಬಹುದಾದ್ದರಿಂದ ಅವನು ಊರಲ್ಲಿಯೇ ಇರಬಹುದು; ಅವನ ಹೆಸರಿನಿಂದಲೇ ಪತ್ರಬರೆಯಬೇಕು, ಎಂದು ಗೊತ್ತುಮಾಡಿದರು. ಆಗ ಮನೋರಮೆಯು ಬರೆಯತಕ್ಕದ್ದನ್ನೆಲ್ಲ ಅಚ್ಚುಕಟ್ಟಾಗಿ ಬರೆದು ಅದನ್ನು ಒಂದು ಕವ್ಹರಿನಲ್ಲಿ ಹಾಕಿ, ಮೇಲ್ವಿಳಾಸವನ್ನು ಸರಿಯಾಗಿ ಬರೆದು ಅದರ ಜೊತೆಗೆ ಒಂದು ವಿನಂತಿಪತ್ರವನ್ನು ಅಂಟಿಸಿದಳು; ಆ ವಿನಂತಿಪತ್ರದಲ್ಲಿ "ಯಾರಾದರೂ ಪುಣ್ಯಾತ್ಮರಿಗೆ ಈ ಪತ್ರವು ಸಿಕ್ಕರೆ ಇದನ್ನು ಟಪಾಲ ಕಟ್ಟೆಯಲ್ಲಿ ಚಲ್ಲಬೇಕು. ಅಂದರೆ ಒಬ್ಬ ಸತಿಯ ಮಾನ ಹಾಗು ಪ್ರಾಣದಾನ ಮಾಡಿದ ಪುಣ್ಯವು ಲಭಿಸುವದು." ಎಂಬ ಸಂಗತಿಯನ್ನು ಬರೆದಳು ಬಳಿಕ ಆಕೆಯು ಭಗವನ್ನಾಮಸ್ಮರಣೆ ಮಾಡಿ ಬಿಲ್ಲಿಗೆ ಬಾಣ ಹೂಡಿ ಅದರ ತುದಿಗೆ ಪತ್ರವನ್ನು ಕಟ್ಟಿ ಅದನ್ನು ಸರಿಯಾಗಿ ಎಸೆದಳು. ಅದು ಸುಯ್ಗುಟ್ಟುತ್ತ ಆಕಾಶಪಂಥವನ್ನಡರಿ ಎಲ್ಲಿಯೋ ಮಾಯವಾಯಿತು. ಈ ಪ್ರಕಾರ ಪತ್ರ ಕಳಿಸುವದಾದ ಮೇಲೆ ಮುಂದಿನ ಭವಿತವ್ಯವನ್ನು ನೆನೆಯುತ್ತ ಮೋಘಶ್ಯಾಮ ಮನೋರಮೆಯರು ಆ ಕಳ್ಳಸೂತ್ರೀ ಮನೆಯ ಪ್ರಾಣರಚನೆಯ ಮಾಹಿತಿಯನ್ನು ಶೋಧಿಸಲುಪಕ್ರಮಿಸಿದರು.

[ 15 ]

ಕಪಿಲಾನದೀ ತೀರವು; ಪುಣ್ಯಕ್ಷೇತ್ರವಾದ ದೇವದತ್ತನಗರದಲ್ಲಿ ಜನಸಮ್ಮರ್ದವು ಹೆಚ್ಚುತ್ತಲಿರುವದು. ಅದರಲ್ಲಿ ಕಪಿಲಾಷಷ್ಠಿಯ ಯೋಗವು ಕೂಡಿ ಬಂದದ್ದರಿಂದಂತೂ ಜನರ ಉತ್ಸುಕತೆಗೆ ಮೇರೆಯಿರಲಿಲ್ಲ. ಕೆಲವರು ನದಿಯಲ್ಲಿ ಸ್ನಾನ ಮಾಡುತ್ತಿದ್ದರು, ಕೆಲವರು ಜಪಾನುಷ್ಠಾನಗಳಲ್ಲಿ ಆಸಕ್ತರಾಗಿದ್ದರು, ಕೆಲವರು ಪ್ರಾಯಶ್ಚಿತ್ತಾದಿ ವೇದೋಕ್ತ ಕರ್ಮಗಳಲ್ಲಿ ನಿರತರಾಗಿದ್ದರು. ಇಂಥ ಸಮಯದಲ್ಲಿ ಕ್ಷೀಣಕಾಯದ ಪುರುಷನೊಬ್ಬನು ಕ್ಷೇತ್ರಪಥಯನ್ನು ತೀರಿಸಿಕೊಂಡು ಒಂದು ಅಶ್ವತ್ಥವೃಕ್ಷದ ಬುಡದಲ್ಲಿ ಕುಳಿತುಕೊಂಡಿದ್ದನು. ಅವನ ಮುಂದೆ ಇಬ್ಬರು ಮೂವರು ಬ್ರಾಹ್ಮಣರು ಕುಳಿತಿದ್ದು ಅವನಿಂದ ಪ್ರಾಯಶ್ಚಿತ್ತ ಹೋಮವನ್ನು ಮಾಡಿಸುತ್ತಿರುವಂತೆ ತೋರುತ್ತಿತ್ತು. ಅಷ್ಟರಲ್ಲಿ ಒಬ್ಬ ಮುದುಕನು ಬಂದು ಆ ಕ್ಷೀಣಕಾಯದ ಪುರುಷನ ಕೈಯಲ್ಲಿ ಒಂದು ಪತ್ರವನ್ನು ತಂದುಕೊಟ್ಟನು. ಆ ಪತ್ರವಾಚನದಿಂದ ಆ ಪುರುಷನಲ್ಲಿ ಸಂತೋಷ ದುಃಖಗಳೆರಡೂ ಒಮ್ಮೆಲೆ ಉತ್ಪನ್ನವಾದವು. ಪ್ರಾಯಶ್ಚಿತ್ತಹೋಮವು ಮುಗಿದ ಬಳಿಕ ಆತನು ಅಲ್ಲಿಂದೆದ್ದು ಮನೆಗೆ ಹೋಗಿ ಘೋರವಾದ ಚಿಂತೆಯಲ್ಲಿ ಮಗ್ನನಾದನು.

ಪ್ರಿಯವಾಚಕರೇ, ಈ ಸಂಗತಿಯನ್ನು ಓದಿ ನೀವು ಗೊಂದಲದಲ್ಲಿ ಬಿದ್ದಿರಬಹುದು. ಆದ್ದರಿಂದ ಇಲ್ಲಿ ನಿಮಗೆ ಆ ಕ್ಷೀಣಕಾಯದ ಪುರುಷನ ಹಾಗು ಆ ಪತ್ರದ ಪರಿಚಯ ಮಾಡಿಕೊಡುವೆವು.

ನಮ್ಮ ಕಥಾನಾಯಿಕೆಯ ಅಣ್ಣನಾದ ಶಿವರಾಯನಿಗೆ ಶಿಕ್ಷೆಯಾದ ಸಂಗತಿಯನ್ನು ವಾಚಕರು ಬಲ್ಲರಷ್ಟೇ? ಆತನಿಗೆ ಈಗ ಶಿಕ್ಷಾಭೋಗವು ಪೂರ್ಣವಾದದ್ದರಿಂದ ಅವನು ಈಗ ದೇವದತ್ತನಗರದಲ್ಲಿ ವಾಸಮಾಡಿಕೊಂಡಿದ್ದನು. ಶಿವರಾಯನಿಗೆ ಶಿಕ್ಷೆಯ ಉಪಭೋಗವು

ದೇವದತ್ತ ನಗರದಲ್ಲಿಯೇ ಆಯಿತು. ಆತನು ಶಿಕ್ಷೆಯಿಂದ ವಿಮುಕ್ತನಾದ ಬಳಿಕ ರಾಮೇಶ್ವರದ ಯಾತ್ರೆಗೆ ಹೋಗಬೇಕೆನ್ನುತ್ತಿರಲು, ವೆಂಕಟಗಿರಿ ಎಂಬವನೊಬ್ಬ ಸುಶೀಲ ಮನುಷ್ಯನು ಅವನ ಬಳಿಗೆ ಬಂದನು. ಈ ವೆಂಕಟಗಿರಿಯು ಶಿವರಾಯನ ತಂದೆಯ ಬಳಿಯಲ್ಲಿ ಬಹುಕಾಲ ಆಳುಮಗನಾಗಿ ಕೆಲಸ ಮಾಡಿದ್ದನು. ಅವನ ಮೇಲೆ ಶಂಕರರಾಯನ ಪ್ರೇಮವು ಬಹಳವಿತ್ತು. ವೆಂಕಟಗಿರಿಯಾದರೂ ಶಂಕರರಾಯನಲ್ಲಿ ಒಳ್ಳೇ ನಿಷ್ಠೆಯನ್ನಿಟ್ಟಿದ್ದನು. ಆದ್ದರಿಂದ ತನ್ನ ಸ್ವಾಮಿಯ ಮಗನ ಈ ರೀತಿ ಅಗೌರವಕ್ಕೆ ಕಾರಣವಾದದ್ದಕ್ಕೆ ಅವನಿಗೆ ಬಹಳ ವಿಷಾದವೆನಿಸುತ್ತಿತ್ತು. ತನ್ನಿಂದ ತನ್ನ ಸ್ವಾಮಿಯ ಮನೆತನದವರಿಗೆ ಏನಾದರೂ ಪ್ರಯೋಜನವಾಗಬೇಕೆಂದು ಅವನು ಮನವುಟ್ಟಿ ಇಚ್ಛಿಸುತ್ತಿದ್ದನು. ಈಗ ವೆಂಕಟಗಿರಿಯು ದೇವದತ್ತ ನಗರದಲ್ಲಿ ಸಬ್‌ಜಜ್ಜ ಕೋರ್ಟಿನಲ್ಲಿ ಜವಾನನಾಗಿದ್ದು, ಸೆರೆಮನೆಯಿಂದ ಮುಕ್ತನಾದ ಶಿವರಾಯನಿಗೆ ಆಶ್ರಯ ಕೊಡಬೇಕೆಂದು ಬಂದಿದ್ದನು.

ಸಜ್ಜನನಾದ ವೆಂಕಟಗಿರಿಯ ಮಾತುಗಳನ್ನು ಕೇಳಿ ಶಿವರಾಯನಿಗೆ ಬಹಳ ಸಂತೋಷವಾಯಿತು. ಆದರೆ ವಿವೇಕಿಯಾದ ಅವನು ಬಡವನಾದ ವೆಂಕಟನ ಮನೆಯಲ್ಲಿರಲಿಕ್ಕೆ ಒಪ್ಪಲಿಲ್ಲ. ಈಬಗ್ಗೆ ಅವರಿಬ್ಬರ ನಡುವೆ ಬಹಳ ಚರ್ಚೆಯಾಯಿತು. ಕಡೆಗೆ ವೆಂಕಟನ ಪ್ರೇಮಾದರಗಳು ಹೆಚ್ಚಿದ್ದರಿಂದ ಶಿವರಾಯನು ಆ ಮಾತಿಗೆ ಒಪ್ಪಬೇಕಾಯಿತು. ವೆಂಕಟನು ಬಡವನಾದರೂ ಶಿವರಾಯನನ್ನು ಮನೆಗೆ ಕರೆದೊಯ್ದು ಅವನ ಉಪಚಾರವನ್ನು ಚನ್ನಾಗಿ ನಡಿಸಿದನು. ಹೀಗೆ ಅವನ ಮನೆಯಲ್ಲಿ ಉಪಚರಿಸಲ್ಪಡುತ್ತಿದ್ದ ಶಿವರಾಯನೇ ಬ್ರಾಹ್ಮಣ ಧರ್ಮಕ್ಕನುಸಾರವಾಗಿ ಇಂದಿನ ಕಪಿಲಾಷಷ್ಠಿಯ ಯೋಗದಲ್ಲಿ ಪ್ರಾಯಶ್ಚಿತ್ತವನ್ನು ತೆಗೆದುಕೊಳ್ಳುವದಕ್ಕಾಗಿ [illegible] ಪಂಡಿತನ

ಬಂದಿದ್ದನು. ಆತನ ಶರೀರವು ಕಾರಾಗೃಹಭೋಗದಿಂದ ಅತ್ಯಂತ ಕೃಶವಾದ್ದರಿಂದ ಅವನನ್ನು ನಾವು ಪ್ರೌಢವಯದ ಪುರುಷನೆಂದು ಸಂಬೋಧಿಸಿದ್ದೇವೆ. ಇನ್ನು ಪತ್ರದ ಸಂಗತಿಯ ಕಡೆಗೆ ವಾಚಕರು ಲಕ್ಷ್ಯಕೊಡಬೇಕು.

ಒಂದನೆ ಪ್ರಕರಣದಲ್ಲಿ ಮನೋರಮೆಯು ಕಳಸೂತ್ರಿಯ [illegible] ಒಂದು ಪತ್ರ ಬರೆದು ಅದನ್ನು ಬಾಗದ ಸವಾಯ ದಿಂದ [illegible] ಆ ಪತ್ರವು ಆ ಮನ [illegible] ಒಂದು [illegible] ರಿಯಲ್ಲಿ ಬೀಳ ತಿನ್ನುತ್ತ [illegible] ದೈವಯೋಗದಿಂದ ಅದು ಒಬ್ಬ ಸಜ್ಜನನ ಕೈಗೆ ಸಿಕ್ಕಿತು. ಅವನು ಅದರ ಮೇಲ್ವಿಳಾಸ ಹಾಗು ವಿನಂತಿ ಪತ್ರವನ್ನು ನೋಡಿಕೊಂಡು ಮನಸ್ಸಿನಲ್ಲಿ ಮರುಗಿದನು. ಅವನಿಗೆ ಶಿವರಾಯನ ಅಲ್ಪ ಸ್ವಲ್ಪ ಪರಿಚಯವಿತ್ತು. ಆದ್ದರಿಂದ ಅವನು ಶಿವರಾಯನು ಎಲ್ಲಿರುವನೆಂಬದನ್ನು ಪೂರ್ಣವಾಗಿ ವಿಚಾರಿಸಿ ಆ ಪತ್ರವು ಅವನಿಗೆ ಮುಟ್ಟುವಹಾಗೆ ವ್ಯವಸ್ಥೆಯನ್ನು ಮಾಡಿದನು. ಮೇಲೆ ಹೇಳಿದಂತೆ ಶಿವರಾಯನು ಪ್ರಾಯಶ್ಚಿತ್ತ ಹೋಮಕ್ಕೆ ಕುಳಿತಾಗ ವೆಂಕಟಗಿರಿಯು ತಂದುಕೊಟ್ಟ ಪತ್ರವೇ ಮನೋರಮೆಯ ಪತ್ರವಾಗಿತ್ತು.

ಪತ್ರವಾಚನದಿಂದುಂಟಾದ ಘೋರಚಿಂತೆಯು ಸ್ವಲ್ಪಕಾಲ ವ್ಯಯದಿಂದ ಕಡಿಮೆಯಾಗಲು, ಶಿವರಾಯನು ಮನೋರಮೆಯನ್ನು ಹ್ಯಾಗೆ ಬಿಡಿಸಿಕೊಂಡು ಬರಬೇಕೆಂಬ ಯೋಚನೆಯನ್ನು ಮಾಡತೊಡಗಿದನು. ದೈವಾನುಕೂಲವುಂಟಾದರೆ ಎಲ್ಲವೂ ಅನುಕೂಲವಾಗುತ್ತದೆಂಬದು ಸುಳ್ಳಲ್ಲ. ಇಲ್ಲಿಯವರೆಗೆ ಮನೋರಮೆ ಹಾಗು ಆಕೆಯ ಅಕ್ಕ-ತಂಗಿಯರು ಪಟ್ಟ ಕಷ್ಟವನ್ನು ನೋಡಿ ದೇವರಿಗೆ ದಯೆಹುಟ್ಟಿತೆಂದು ಕೇಳಬೇಕಾಗಿಲ್ಲ. ಯಾಕೆಂದರೆ [illegible] ತಿಸು

ಕರೆದೊಯ್ಯುತ್ತೇನೆ."

ಬಾಬಾಸಾಹೇಬನಿಗೆ ವಚನ ಕೊಟ್ಟಂತೆ ವೆಂಕಟಗಿರಿಯು ಮನೆಗೆ ಹೋಗಿ ಶಿವರಾಯನಿಗೆ ಎಲ್ಲ ಸಂಗತಿಯನ್ನು ಹೇಳಿದನು. ಬಾಬಾಸಾಹೇಬನು ಯಾರೆಂಬದು ಅವನಿಗೆ ಪೂರ್ಣವಾಗಿ ಗೊತ್ತಾಗಲಿಲ್ಲ. ಆದರೂ ಆತನು ವೆಂಕಟನಿಗೆ ನಾಳೆಗೆ ಬಾಬಾಸಾಹೇಬನನ್ನು ಕರೆತರಬೇಕೆಂದು ಹೇಳಿದನು.

ಮರುದಿನ ಬಾಬಾಸಾಹೇಬನಿಗೂ ಶಿವರಾಯನಿಗೂ ಭೆಟ್ಟಿಯಾಯಿತು. ತಾನು ಯಾರು? ಆ ದುಃಖಿತ ಕುಟುಂಬದವರ ವಿಷಯವಾಗಿ ತಾನು ಇಷ್ಟು ತಟ್ಟಿಕೊಂಡಿರುವ ಕಾರಣವೇನು? ಎಂಬದನ್ನು ಅವನು ಸವಿಸ್ತಾರವಾಗಿ ಹೇಳಿದನು. ಅವನ ಮಾತಿನಲ್ಲಿರುವ ಸತ್ಯತೆಯಿಂದ ಮತ್ತು ಅವನ ಮುಖಲಕ್ಷಣದ ಮೇಲಿಂದ ಶಿವರಾಯನ ಮನಸ್ಸು ಮೆಲ್ಲಮೆಲ್ಲನೆ ಸ್ವಚ್ಛವಾಗತೊಡಗಿತು. ಮೊದಮೊದಲು ಆತನು ಬಾಬಾಸಾಹೇಬನ ವಿಷಯವಾಗಿ ಕಲುಷಿತಮನಸ್ಕನಾಗಿದ್ದನು. ಯಾಕಂದರೆ ಶಿವರಾಯನು ಕಾರಾಗೃಹದಿಂದ ಬಿಟ್ಟು ಬಂದಬಳಿಕ ಅವನಿಗೆ ಕರ್ಣಕಠೋರವಾದ ಹಾಗು ಅತಿ ನಿಂದ್ಯವಾದ ಸಂಗತಿಯು ಗೊತ್ತಾಗಿತ್ತು. ಬಟುಕನು ತನ್ನ ನೀಚಸ್ವಭಾವಕ್ಕನುಸರಿಸಿ ಸುಲೋಚನೆಯ ವಿಷಯವಾಗಿ ಅಭದ್ರ ಸಂಗತಿಗಳನ್ನು ಜನತೆಯಲ್ಲಿ ಪ್ರಸಾರಗೊಳಿಸಿದ್ದನು ಇಂಥ ದುಷ್ಟ ಸುದ್ದಿಯ ಶ್ರವಣದಿಂದ ಶಿವರಾಯನಿಗೆ ಮರಣಪ್ರಾಯವಾದ ದುಃಖವಾಗಿತ್ತು. ಅವನು ಅತ್ಯಂತ ಉದಾಸೀನನಾಗಿ ವೆಂಕಟನ ಮನೆಯಲ್ಲಿ ಕಾಲಕಳೆಯುತ್ತಿದ್ದನು. ಬಾಬಾಸಾಹೇಬನು ತನ್ನ ಅಕ್ಕ-ತಂಗಿಯರನ್ನು ಸಂರಕ್ಷಿಸುವನೆಂಬ ವರ್ತಮಾನವನ್ನು ಕೇಳಿದಾಗ ಅವನಿಗೆ ದುರ್ಭಾವನೆಯಾಗಲಿಕ್ಕೆ ಈ ಸಂಗತಿಯೇ ಕಾರಣವಾಗಿತ್ತು, ಆದರೆ ಈಗ ಅವನಲ್ಲಿ ಯಾವ ದೋಷವೂ ಇಲ್ಲವೆಂಬದು ಮನವರಿಕೆಯಾಗಲು, ಬಟು

ಕನು ಹುಟ್ಟಿಸಿದ ಸುದ್ದಿಯು ಸುಳ್ಳೆಂದು ತಿಳಿದನು; ಅಷ್ಟರಲ್ಲಿ ಬೀದಿಯಲ್ಲಿ ದೊಡ್ಡ ಕೋಲಾಹಲವು ನಡೆಯಿತು, ಸಾವಿರಾರು ಜನರು ನೆರೆದರು; ನಾಲ್ವರು ಪೋಲೀಸರು ಒಂದು ವ್ಯಕ್ತಿಯು ರಟ್ಟೆಗೆ ಹಗ್ಗಹಚ್ಚಿ ಎಳೆದುಕೊಂಡು ಹೋಗುತ್ತಿದ್ದರು. ಒಬ್ಬ ಡಂಗುರದವನು ಉಚ್ಚಸ್ವರದಿಂದ ಆ ವ್ಯಕ್ತಿಯು ಅಪರಾಧವನ್ನು ಕೂಗಿ ಹೇಳುತ್ತಿದ್ದನು. ಅವನು ಸಾರುತ್ತಿದ್ದ ಸಂಗತಿಯೇನಂದರೆ — "ರಟ್ಟೆಗೆ ಹಗ್ಗಹಚ್ಚಲ್ಪಟ್ಟಿದ್ದ ಈ ಮನುಷ್ಯನ ಹೆಸರು ಬಟುಕನೆಂದಿರುತ್ತದೆ ಈತನು ಮೈಸೂರ ಬ್ಯಾಂಕಿನಲ್ಲಿ ಖೊಟ್ಟಿ ಸಹಿಮಾಡಿ ಹತ್ತುಸಾವಿರ ರೂಪಾಯಿಗಳನ್ನು ಎತ್ತಿ ಹಾಕಿರುತ್ತಾನೆ. ಇದಲ್ಲದೆ ಒಬ್ಬ ಸ್ತ್ರೀಯು ಕೊಲೆಯನ್ನು ಮಾಡಿರುತ್ತಾನೆ. ಆದ್ದರಿಂದ ನ್ಯಾಯಕೋರ್ಟಿನಲ್ಲಿ ಈತನಿಗೆ ಆಮರಣ ಕರಿನೀರಿನ ಶಿಕ್ಷೆಯಾಗಿರುತ್ತದೆ."

ಪೋಲೀಸರಿಂದ ಪ್ರತಿಬಂಧಿಸಲ್ಪಟ್ಟಿದ್ದ ಬಟುಕನನ್ನು ಶಿವರಾಯನು ಕಣ್ಣೆಟ್ಟಿ ನೋಡಿ ಮನಸ್ಸಿನಲ್ಲಿ ಕಡುನೊಂದುಕೊಂಡನು. ದೇವಾ, ಈತನಿಗೆ ಇಂಥ ದುರ್ಬುದ್ಧಿಯನ್ನು ಯಾಕೆ ಕೊಟ್ಟಿರುವೆ? ಎಂದು ನುಡಿದನು. ಕೃತಕರ್ಮಕ್ಕೆ ತಕ್ಕ ಪ್ರಾಯಶ್ಚಿತ್ತವು ಆಗದೆ ಇರುವದಿಲ್ಲೆಂದು ಎಲ್ಲರೂ ಅಂದುಕೊಂಡರು. ಆ ಪ್ರಸಂಗವು ಒದಗಿದ ಬಳಿಕ ಶಿವರಾಯನ ಮನಸ್ಸು ಪೂರ್ಣವಾಗಿ ಸ್ವಚ್ಛವಾಯಿತು. ಅವನು ಬಾಬಾಸಾಹೇಬನ ಸಂಗಡ ತಮ್ಮ ಸುಖ-ದುಃಖಗಳನ್ನು ಮಾತಾಡುತ್ತಿರಲು, ಭೀಮರಾಯನೂ ಶಿವರಾಯನನ್ನು ಹುಡುಕುತ್ತ ಅಲ್ಲಿಗೆ ಬಂದನು. ತನ್ನ ಜೀವದ ಗೆಳೆಯನಾದ ಭೀಮರಾಯನು ಬರಲು, ಶಿವರಾಯನು ಸಂತೋಷಬಟ್ಟನು; ಮತ್ತು ಅವನಿಗೆ ಅಭ್ಯುತ್ಥಾನಪೂರ್ವಕವಾಗಿ ಸನ್ಮಾನ ಮಾಡಿದನು. ಭೀಮರಾಯನು ಅವನಿಗೆ ಪ್ರತಿ ಸನ್ಮಾನ ಮಾಡಿ ಕುಳಿತನು. ಬಳಿಕ ಶಿವರಾಯನು ಯೋಗಕ್ಷೇಮವನ್ನು ವಿಚಾರಿಸಿದನು. ಆಗ ಭೀಮರಾ

ಯನು ಅತ್ಯಂತ ವಿನಯದಿಂದ ತನ್ನಿಂದ ಇಷ್ಟೆಲ್ಲ ಅನರ್ಥವಾಯಿ ತೆಂಬರ್ಥದ ಮಾತುಗಳನ್ನಾಡಿ ಶಿವರಾಯನ ಕ್ಷಮೆಯನ್ನು ಬೇಡಿ, ಬಳಿಕ ಆತನು ಶಿವರಾಯನಿಗೆ ಲಕ್ಷ್ಮೆಯು ದ ಬಳಿಕ ಇಂದಿನ ವರೆಗೆ ನಡೆದ ಎಲ್ಲ ಸಂಗತಿಯನ್ನು ಶಿವರಾಯನಿಗೆ ತಿಳಿಸಿದನು. ಅದರ ಶ್ರವಣದಿಂದ ಆತನ ಅಂತಃಕರಣವು ಕಳವಳಿಸಿತು. ಆಗ ಭೀಮರಾಯನು ಅವನನ್ನು ಸಮಾಧಾನ ಪಡಿಸಿದನು. ಬಳಿಕ ಶಿವರಾಯನು ಮನೋರಮೆಯ ಸಂಗತಿಯನ್ನು ಹೇಳಿ ಆಕೆಯ ಪತ್ರವನ್ನು ಅವರ ಮುಂದಿಟ್ಟನು. ಆ ಪತ್ರವನ್ನು ತಕ್ಕೊಂಡು ಭೀಮರಾಯನು ಓದತೊಡಗಿದನು.

"ಪ್ರಿಯ ಭ್ರಾತೃಗಳ ಸನ್ನಿಧಿಯಲ್ಲಿ ಪ್ರೇಮಪೂರ್ವಕ ಸಾ॥ ನಮಸ್ಕಾರಗಳು.

ಈಗ ನಾನು ಯಾವದೋ ಒಂದು ಕಳಸೂತ್ರಿಯ ಮನೆಯಲ್ಲಿ ಸೆರೆಯಾಳಾಗಿದ್ದೇನೆ. ನನ್ನ ಭಾವೀ ಪತಿರಾಯನೂ ಇಲ್ಲಿಯೇ ಇರುವನು. ನೀವು ಸಾಹಸಪಟ್ಟು ನಾವಿರುವ ಸ್ಥಳವನ್ನು ಹುಡುಕಿ ನಮ್ಮನ್ನು ಬಿಡಿಸದಿದ್ದರೆ ಇನ್ನು ಸ್ವಲ್ಪ ದಿನಗಳಲ್ಲಿ ನಮ್ಮ ಇಹಲೋಕ ಯಾತ್ರೆಯು ಮುಗಿಯುವದು. ನಾವು ಯಾವ ಕೆರೆಯಲ್ಲಿರುವೆವೆಂಬದನ್ನು ಹೇಳಲಾರೆನು. ಇತಿ ಸಾ॥ ನಮಸ್ಕಾರಗಳು.

ತಮ್ಮ ಭಗಿನಿ,
ಮನೋರಮಾ."

ಈ ಪ್ರಕಾರ ಬರೆದ ಪತ್ರವನ್ನು ನೋಡಿ ಭೀಮರಾಯನು ದಂಗಾದನು. ಆತನು ಒಮ್ಮೆಲೆ— ಮೇಘಶ್ಯಾಮನು ಬದುಕಿರುವನು-ಬದುಕಿರುವನು, ಎಂದು ಕುಣಿದಾಡಿದನು. ಈತನ ಮುಂದೆ ಈ ಗುಪ್ತ ಸಂಗತಿಯನ್ನು ಯಾಕೆ ಹೇಳಿದೆನೋ ಎಂದು ಶಿವರಾಯನು ಚಡಪಡಿಸಿದನು. ಆಗ ಬಾಪಾಸಾಹೇಬ ಹಾಗು ಶಿವ

ರಾಯರು ಕೂಡಿ ಅವನನ್ನು ಸುಮ್ಮನಿರಿಸಬೇಕಾದರೆ ಸಾಕುಸಾಕಾಯಿತು. ಬಾಬಾಸಾಹೇಬನಿಗೆ ಕಳಸೂತ್ರಿಯ ಮನೆಯು ಗೊತ್ತಿದ್ದರಿಂದ, ಕೂಡಲೆ ಅವನು ವಿಸರಾಂಪನ ಕಿವಿಯಲ್ಲಿ ಏನೇನೋ ಹೇಳಿದನು. ಬಳಿಕ ಮೂವರೂ ಕೂಡಿ ಯೋಚಿಸಿ, ಆ ಕಳಸೂತ್ರಿಯ ಮನೆಗೆ ಹ್ಯಾಗೆ ಮುತ್ತಿಗೆ ಹಾಕಬೇಕೆಂಬದನ್ನು ನಿರ್ಧರಿಸಿದರು.

## ೩೦ ।

ಒಂದು [illegible] ಡಾಕ್ಟರ ವಾಮನರಾಯನ [illegible] ಕುಳಿತು ವರ್ತಮಾನಪತ್ರ ಓದುವದರಲ್ಲಿ ತಲ್ಲೀನನಾಗಿದ್ದನು. ಅವನ [illegible] ಪತ್ನಿಯು ಮನೆಗೆಲಸಗಳಲ್ಲಿ ಮಗ್ನಳಾಗಿದ್ದಳು. [illegible] ಸಂಬಂಧದ ಒಂದು ಚಿಕ್ಕ ಮಗುವು ತೋಟದಲ್ಲಿ ಆಡುತ್ತಿತ್ತು. ಇಂಥ ಹೊತ್ತಿನಲ್ಲಿ ಅವರ ಮನೆಗೆ ಒಬ್ಬ ಭಿಕ್ಷುಕಿಯು ದೀನಸ್ವರದಿಂದ ಭಿಕ್ಷೆ ಬೇಡುತ್ತ ಬಂದಳು. ಆಕೆಯ ಮುಖವು ಅತ್ಯಂತ ಭಯಂಕರವಾಗಿತ್ತು. ಅವಳು ಇಂಥವಳೇ ಎಂದು ಯಾರೂ ಗುರ್ತಿಸುವಹಾಗಿದ್ದಿಲ್ಲ. ಆದರೆ ಆಕೆಯ ದನಿಯ ಗುರ್ತು ಮಾತ್ರ ಲಲಿತೆಗೆ ಅಲ್ಪ-ಸ್ವಲ್ಪ ಹತ್ತಿತು. ಆದರೂ ಅವಳ ಮುಖಲಕ್ಷಣವು ಬಹು ವಿಕೃತಸ್ವರೂಪವನ್ನು ಹೊಂದಿದ್ದರಿಂದ ಲಲಿತೆಯ ಸಂಶಯವು ಆಕೆಗೇ ನಿಜವೆನಿಸಲಿಲ್ಲ. ಲಲಿತೆಯು ಆಕೆಗೆ ಭಿಕ್ಷಹಾಕಿ ಸುಮ್ಮನೆ ಬರದ ಆಕೆಗೊಂದು ಪ್ರಶ್ನಮಾಡಿದಳು. ಅದೇನಂದರೆ — "ನೀನು ಹೀಗೆ ಭಿಕ್ಷ ಬೇಡುತ್ತ ತಿರುಗುವದಕ್ಕಿಂತ, ನಮ್ಮ ಮನೆಯಲ್ಲಿ ಚಾಕರಿಗೆ ನಿಂತರೆ ನಿನಗೆ ದಿನಾಲು ಊಟಕ್ಕೆ ಹಾಕುವದಲ್ಲದೆ, ಬಟ್ಟೆಬರೆಗಳನ್ನೂ ಕೊಡುವೆವು. ನಮ್ಮ ಮಗುವನ್ನು ಆಡಿಸಕ್ಕೆ ಒಬ್ಬ ದಾಸಿಯು ಅವಶ್ಯಕತೆಯದೆ."

ಲಲಿತೆಯ ಮಾತಿನಿಂದ ಭಿಕ್ಷುಕಿಗೆ ಸ್ವಲ್ಪ ಆಶಾಂಕುರವು ತ್ಪನ್ನವಾಯಿತು. ಅವಳು ಲಲಿತೆಯ ಮಾತಿಗೆ ಒಪ್ಪಿಕೊಂಡು ಅವರ ಮನೆಯಲ್ಲಿ ನಿಂತುಕೊಂಡಳು. ಪಾಪ! ಆ ಬಡಪ್ರಾಣಿಗೆ ಲಲಿತೆಯ ಮಗುವನ್ನು ನೋಡಿ ಬಹು ಸಂತೋಷವಾಯಿತು, ಅವಳು ಅದನ್ನು ಬಹು ಪ್ರೀತಿಯಿಂದ ಎತ್ತಿಕೊಂಡಳು. ಅದರಂತೆ ಆ ಮಗುವಾದರೂ ಆ ಭಿಕ್ಷುಕಿಯ ಮೇಲೆ ವಿಲಕ್ಷಣ ಪ್ರೇಮವನ್ನು ಮಾಡತೊಡಗಿತು. ಹೀಗೆ ಆ ಮಗು ಹಾಗು ಭಿಕ್ಷುಕಿಯ ಪರಸ್ಪರ ಪ್ರೇಮವನ್ನು ನೋಡಿ ಲಲಿತೆಗೆ ಆಶ್ಚರ್ಯವಾಯಿತು. ಇಷ್ಟೇ ಅಲ್ಲ; ಇದರಿಂದ ಆಕೆಗೆ ಬಂದ ಸಂಶಯವು ದೃಢವಾಯಿತು. ಪ್ರತಿದಿನ ಅವಳು ಆ ಮಗುವಿನ ಹಾಗು ಭಿಕ್ಷುಕಿಯ ಪರಸ್ಪರ ಪ್ರೇಮವನ್ನು ಪರೀಕ್ಷಿಸಹತ್ತಿದಳು. ಅವರಿಬ್ಬರ ಪ್ರೇಮವು ದಿನದಿನಕ್ಕೆ ವೃದ್ಧಿಂಗತವಾಗತೊಡಗಿತು. ಅವರ ಸ್ವಾಭಾವಿಕ ಪ್ರೇಮದಿಂದ ಲಲಿತೆಯ ಸಂಶಯವು ನಿಸ್ಸಂಶಯವಾಯಿತು. ಭಿಕ್ಷುಕಿಯು ನಿಶ್ಚಯವಾಗಿ ಅವಳೇ, ಎಂದು ಭಾವಿಸಿದಳು. ಆದರೆ ಈ ಸಂಗತಿಯನ್ನು ಗಂಡನ ಮುಂದೆ ಹೇಳಲಿಕ್ಕೆ ಅವಳಿಗೆ ಧೈರ್ಯವಾಗಲಿಲ್ಲ. ಹೇಳುವ ಕುತೂಹಲವು ಮಾತ್ರ ಅವಳಲ್ಲಿ ವಿಶೇಷವಾಗಿತ್ತು.

ಪ್ರಿಯವಾಚಕರೇ, ಲಲತೆಯನ್ನು ಇಷ್ಟು ಗೊಂದಲದಲ್ಲಿ ಕೆಡವಿದ ಆ ಭಿಕ್ಷುಕಿಯಾರಾಗಿರಬಹುದು? ಆ ಮಗುವನ್ನು ಒಲಿಸಿಕೊಳ್ಳುವಂಥ ಶಕ್ತಿಯು ಆ ಭಿಕ್ಷುಕಿಯಲ್ಲಿ ಯಾವದಿರಬಹುದು? ಯಾವ ಪ್ರಾಣಿಗಾದರೂ ರಕ್ತಸಂಬಂಧವಿದ್ದ ಹೊರತು ಇಂಥ ಸ್ವಾಭಾವಿಕ ಪ್ರೇಮದ ಪ್ರವೃತ್ತಿ ಯಾಗುವದಿಲ್ಲ. ಆದ್ದರಿಂದ ಭಿಕ್ಷುಕಿಯ ಪೂರ್ವ ಪರಿಚಯವನ್ನು ಮಾಡಿಕೊಳ್ಳೋಣ ನಡೆಯಿರಿ.

ಡಾಕ್ಟರ ವಾಮನರಾಯನಿಗೆ ತಾರೆ ಎಂಬೊಬ್ಬ ಹೆಂಡತಿಯಿದ್ದಳಷ್ಟೇ; ಆಕೆಯು ತವರು ಮನೆಯಲ್ಲಿದ್ದಾಗ ಗ್ರಾಮರೀತಿಯಿಂದ

ಕಾಲ ಕಳೆಯುತ್ತಿದ್ದಳೆಂಬದಾದರೂ ವಾಚಕರಿಗೆ ಗೊತ್ತಿದ್ದ ಸಂಗತಿಯಾಗಿದೆ. ವಾಮನರಾಯನು ಕಲಿಯುವದನ್ನು ಬಿಟ್ಟು ತ್ರಿವಿಕ್ರಮನಿಗೆ ಸಹಾಯ ಮಾಡುವದಕ್ಕೆಂದು ಬಂದ ಬಳಿಕ ತಾರೆಯು ಅವನ ಬಳಿಯಲ್ಲಿರಹತ್ತಿದಳು. ಆದರೆ ನೀಚನಾದ ಕಮಲನಾಭನು ತಾರೆಯನ್ನು ಒಲಿಸಿಕೊಳ್ಳುವದಕ್ಕಾಗಿ ಹೊಂಚು ಹಾಕಿದ್ದನು. ಆ ದುಷ್ಟನು ಹಲವು ತರದ ಉಪಾಯಗಳಿಂದ ಆ ಮುಗ್ಧೆಯನ್ನು ಒಲಿಸಿಕೊಂಡು ಒಂದು ದಿನ ಅವಳೊಡನೆ ಪಲಾಯನ ಹೇಳಿಸಿದನು. ಹೋಗುವಾಗ ತಾರೆಯು ತನ್ನ ಗಂಡನಿಗಾಗಿ ಒಂದು ಪತ್ರವನ್ನು ಬರೆದಿಟ್ಟಳು. "ನೀನು ಲಲಿತೆಯೆಂಬ ಸ್ತ್ರೀಯ ಸಂಗಡ ವ್ಯವಹಾರ ಮಾಡಹತ್ತಿದ್ದರಿಂದ ನಾನು ನನ್ನ ಮನಸ್ಸಿಗೆ ಸರಿ ಕಂಡಲ್ಲಿ ಹೊರಟು ಹೋಗಿರುತ್ತೇನೆ.

ತಾರೆಯು ಮಧ್ಯರಾತ್ರಿಯಲ್ಲಿ ಮನೆಯಿಂದ ಹೊರಟು ಹೋದಳು. ಆಗ ವಾಮನನು ಮನೆಯಲ್ಲಿದ್ದಿಲ್ಲ. ಒಂದು ಮಹತ್ವದ ಕೆಲಸಕ್ಕಾಗಿ ತ್ರಿವಿಕ್ರಮನ ಮನೆಗೆ ಹೋಗಿದ್ದನು. ಆತನು ತಿರುಗಿ ಬರುವಷ್ಟರಲ್ಲಿ ಮನೆಯಲ್ಲಿ ಹೆಂಡತಿಯಿರದೆ ಮಗುವೊಂದು ಮಾತ್ರ ಆಡುತ್ತಿತ್ತು. ಅಷ್ಟರಲ್ಲಿ ಅವನಿಗೆ ಹೆಂಡತಿಯ ಪತ್ರವೂ ಸಿಕ್ಕಿತು. ಆಗ ಅವನು ಸಂತಾಪಗೊಂಡು ಎಲ್ಲ ಕಡೆಯಲ್ಲಿಯೂ ಆಕೆಯ ಶೋಧಮಾಡಿದನು. ಕಮಲನಾಭನು ಬುದ್ಧಿಪೂರ್ವಕವಾಗಿ ಆಕೆಯನ್ನು ಎಬ್ಬಿಸಿಕೊಂಡು ಹೋದದ್ದರಿಂದ ಅವನು ವಾಮನನಿಗೆ ಸುದ್ದಿಯನ್ನು ಹತ್ತಗೊಡುವನೇ? ಈ ಮಾತಿಗೆ ಎಷ್ಟೋ ದಿವಸಗಳು ಕಳೆದವು. ತ್ರಿವಿಕ್ರಮನ ಆಗ್ರಹದಿಂದ ವಾಮನನು ಆತನ ತಂಗಿಯಾದ ಲಲಿತೆಯನ್ನು ಮದುವೆಯಾದನು. ಇತ್ತ ಕಮಲನಾಭನೊಡನೆ ಹೊರಟು ಹೋಗಿದ್ದ ತಾರೆಯು ಒಂದೇ ದಿನದಲ್ಲಿ ಪಶ್ಚಾತ್ತಾಪವನ್ನು ಹೊಂದಿ ತನ್ನ ಗಂಡನ ಕಡೆಗೆ ತನ್ನನ್ನು ಕಳಿಸುವದಕ್ಕಾಗಿ ಕಮಲನಾಭನನ್ನು [illegible]

ದಳು; ಆದರೆ ಆ ನೀಚನು ಆಕೆಗೆ ಮನೆಸೋಕ್ತ ಸೆರೆಯನ್ನು ಕಂಡಿಸಿ ಅವಳನ್ನು ಒಂದು ಗುಪ್ತಸ್ಥಳದಲ್ಲಿ ಸೆರೆಯಿರಿಸಿ, ತಾನು ಭೂಪತಿಯ ಬಳಿಗೆ ಹೊರಟು ಹೋದನು. ಕರ್ಮಧರ್ಮಸಂಯೋಗದಿಂದ ಕಮಲನಾಭನ ಆ ಗುಪ್ತಸ್ಥಳವು ಕಳವಾಗಿ ತಾರೆಯು ಕಳ್ಳರಕೈಗೆ ಸಿಕ್ಕಳು. ಇಂಥ ಸುಂದರ ಯುವತಿಯು ತಮ್ಮ ಬಳಿಯಲ್ಲಿದ್ದರೆ ತಮ್ಮ ಕಳವು ಹೊರಬೀಳಬಹುದೆಂದು ಅವರು ಆಕೆಯನ್ನು ಒಬ್ಬ ವೇಶ್ಯೆಗೆ ಮಾರಿಬಿಟ್ಟರು. ತಾರೆಯು ತನ್ನ ಕೃತಕರ್ಮಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ಆ ವೇಶ್ಯೆಯ ಮನೆಯಲ್ಲಿ ಅನುಭವಿಸಹತ್ತಿದಳು. ಆಗ ಅವಳಿಗೆ ಅತ್ಯಂತ ಪಶ್ಚಾತ್ತಾಪವಾಯಿತು. ಇನ್ನು ಈ ಲೋಕದಲ್ಲಿ ಇರಬಾರದೆಂಬ ವಿಚಾರವು ಅವಳಲ್ಲಿ ಉತ್ಪನ್ನವಾಯಿತು ಒಂದುದಿನ ಅವಳು ಅಡಿಗೆಯನ್ನು ಮಾಡಲಿಕ್ಕೆ ಕುಳಿತಾಗ ಕಾದು ಕುದಿಯುತ್ತಿರುವ ಎಣ್ಣೆಯನ್ನು ಮೈಮೇಲೆ ಸುರುವಿಕೊಂಡಳು ಅದರಿಂದ ಅವಳ ಶರೀರವೆಲ್ಲ ಬೆಂದುಹೋಯಿತು ಆಗ್ಗೆ ಅವಳು ಸಾಯತಕ್ಕವಳು; ಆದರೆ ಅವಳ ಆಯುಸ್ಸೂತ್ರವು ಗಟ್ಟಿ ಇದ್ದದರಿಂದ ಆ ಪ್ರಸಂಗವು ಒದಗಲಿಲ್ಲ. ವೇಶ್ಯೆಯು ಅವಳನ್ನು ಆಸ್ಪತ್ರೆಗೆ ಕಳುಹಿಸಿ ಉಪಚರಿಸಿದಳು. ಅದರಿಂದ ತಾರೆಗೆ ಗುಣವಾಯಿತು; ಆದರೆ ಆಕೆಯ ಮೋರೆಯು ಅಕರಾಳ-ವಿಕರಾಳವಾಗಿ ಅತಿ ಅಸಹ್ಯ ಸ್ವರೂಪವನ್ನು ಹೊಂದಿತು. ಒಂದು ದಿನ ಅವಳು ಆಸ್ಪತ್ರೆಯಿಂದ ತಪ್ಪಿಸಿಕೊಂಡು ತನ್ನ ಯಜಮಾನತಿಯ ಮನೆಗೆ ಬಂದಳು; ಆ ವೇಶ್ಯೆಯು ಅವಳನ್ನು ಗುರ್ತಿಸಲಿಲ್ಲ. ಆಗ ತಾರೆಯು ತನ್ನ ಗುರುತು ಹೇಳಿದಳು: ಆದರೆ ಆಕೆಯ ಭಯಂಕರ ರೂಪವನ್ನು ನೋಡಿ ವೇಶ್ಯೆಯು ಅವಳನ್ನು ತನ್ನ ಹತ್ತರ ಇಟ್ಟುಕೊಳ್ಳಲಿಕ್ಕೆ ಒಪ್ಪಲಿಲ್ಲ ಆದ್ದರಿಂದ ತಾರೆಯು ಆಕೆಯ ಬಳಿಯಲ್ಲಿ ರೈಲ ಖರ್ಚನ್ನು ಇಸಕೊಂಡು ತನ್ನ ಗಂಡನ ಊರಿಗೆ ಬಂದಳು. ಈ ತಾರೆಯೇ ಮೇಲೆ ಹೇಳಿದ ಭಿಕ್ಷುಕಿಯಾದ್ದರಿಂದ ಲಲಿತೆಯು ಸಂಶಯಕ್ಕೆ ಆಸ್ಪದವಾಗಿತ್ತು

ವಾಮನನ ಮನೆಯಲ್ಲಿದ್ದ ಮಗುವು ತಾರೆಯ ಹೊಟ್ಟೆಯಲ್ಲಿ ಹುಟ್ಟಿದ್ದಷ್ಟೇ; ಪ್ರತ್ಯಕ್ಷ ತಾಯಿಯು ಕರುಳಾದ್ದರಿಂದ ಭಿಕ್ಷುಕಿಯ ವೇಷದ ಆ ತಾರೆಯು ಆ ಮಗುವಿನ ಮೇಲೆ ಸ್ವಾಭಾವಿಕ ಪ್ರೇಮ ಮಾಡಬೇಕಾಯಿತು. ರಕ್ತಸಂಬಂಧದಿಂದ ಆ ಮಗುವಿನಲ್ಲಿಯೂ ಸ್ವಾಭಾವಿಕ ಪ್ರೇಮವುಂಟಾದದ್ದು ಆಶ್ಚರ್ಯವಲ್ಲ. ಈ ಪ್ರೇಮ ಪರೀಕ್ಷೆಯನ್ನು ಮಾಡಿಯೇ ಲಲಿತೆಯು ಭಿಕ್ಷುಕಿಯ ಮೂಲಸ್ವರೂಪ ವನ್ನು ಕಂಡುಹಿಡಿದಿದ್ದಳು. ಹೀಗಿರಲು ಒಂದು ದಿನ ಆ ಮಗುವಿಗೆ ಜ್ವರ ಬಂದವು. ಬರಬರುತ್ತ ಜ್ವರ ಬಾಧೆಯು ಹೆಚ್ಚಾದ್ದರಿಂದ ಆ ಮಗುವು “ಉಳಿಯುತ್ತದೋ ಇಲ್ಲವೋ ಎಂಬ ಸಂಶಯವುತ್ಪನ್ನವಾ ಯಿತು ವಾಮನರಾಯನು ತಾನೇ ಡಾಕ್ಟರನಿದ್ದದರಿಂದ ತನ್ನ ಶಕ್ತಿಮೀರಿ ಹೆಣಗಿದನು. ಆದರೂ ಆ ಮಗುವಿಗೆ ಗುಣವಾಗಲಿಲ್ಲ. ಕಡೆಗೆ ಆ ಮಗುವಿನ ಪ್ರಾಣವು ಹಾರುತ್ತದೆಂದು ಸ್ಪಷ್ಟವಾಗಿ ಕಾಣ ಹತ್ತಲು, ಆ ಭಿಕ್ಷುಕಿಯು ಅತ್ಯಂತವಾಗಿದುಃಖಿಸಿ ತಾನೇ ಮೊದಲು ಪ್ರಾಣಬಿಡುವ ಯೋಚನೆಯನ್ನು ಮಾಡಿದಳು. ಹೀಗೆ ಅವಳು ನಿಶ್ಚಯಿಸಿ ವಿಷವನ್ನು ಸಿದ್ಧಪಡಿಸುತ್ತಿರಲು, ಲಲಿತೆಯು ಗಂಡನೆದು ರಿಗೆ ಭಿಕ್ಷುಕಿಯ ಸಂಬಂಧದಿಂದ ತನಗೆ ತಿಳಿದ ಎಲ್ಲ ಸಂಗತಿಗಳನ್ನು ಹೇಳಿದಳು. ಅದನ್ನು ಕೇಳಿ ವಾಮನನಿಗೆ ಆಶ್ಚರ್ಯವಾಯಿತು. ಆತನು ಭಿಕ್ಷುಕಿಯ ಸ್ವರೂಪವನ್ನು ಮನಸ್ಸಿನಲ್ಲಿ ತಂದು ಅವಳು ತನ್ನ ಹೆಂಡತಿಯು ಹೌದೋ ಹೇಗೆಂಬದನ್ನು ತೂಗಿ ನೋಡುತ್ತಿ ರಲು, ವಿಷಪ್ರಾಶನಕ್ಕೆ ಸಿದ್ಧಳಾಗಿದ್ದ ಆ ಭಿಕ್ಷುಕಿಯು ಅವನ ಬಳಿಗೆ ಬಂದು ಅವನ ಚರಣಗಳನ್ನು ಗಟ್ಟಿಯಾಗಿ ಹಿಡಿದು ನುಡಿದಳೇನಂ ದರೆ —“ಮಹಾರಾಜ, ನಾನು ಅತ್ಯಂತ ದುರಾಚಾರಿಣಿಯು; ಪತಿ ದ್ರೋಹಿಯು; ನನಗೆ ದೇವರು ಎಂಥ ಶಿಕ್ಷೆಯನ್ನು ವಿಧಿಸಿದರೂ ಅಲ್ಪವೇ ಆಗಿರುವದು. ಇದಕ್ಕೂ ಹೆಚ್ಚು ನನ್ನ ಇತಿಹಾಸವನ್ನು

ಹೇಳಲಾರೆನು. ಅಂತ್ಯಕಾಲದಲ್ಲಿ ಪತಿಚರಣ ದರ್ಶನವಾದ್ದರಿಂದ ನಾನು ಧನ್ಯಳೆಂದು ಭಾವಿಸುತ್ತೇನೆ!!''

ಈ ಪ್ರಕಾರ ನುಡಿದು ಆ ಭಿಕ್ಷುಕಿಯು ವಿಷಪ್ರಾಶನ ಮಾಡಿ ಪತಿಚರಣದ ಮೇಲೆಯೇ ಪ್ರಾಣಬಿಟ್ಟಳು ಈ ಪ್ರಸಂಗವನ್ನು ನೋಡಿ ವಾಮನನು ಮುಂದುಗಾಣದೆ ನಿಂತುಕೊಂಡನು. ತಾರೆಯು ಬುದ್ಧಿಸಾಲದೆ ದುರ್ವ್ಯವಹಾರದಲ್ಲಿ ಬಿದ್ದರೂ ಕಡೆಗೆ ಆಕೆಗಾದ ಪಶ್ಚಾತ್ತಾಪವನ್ನು ನೋಡಿ ಅವನಿಗೆ ಬಹಳ ಸಮಾಧಾನವೆನಿಸಿತು. ಬಳಿಕ ಆತನು ಜನರಲ್ಲಿ ಭಿಕ್ಷುಕಿಯು ತನ್ನ ಹೆಂಡತಿಯೆಂಬದನ್ನು ಪ್ರಚುರಗೊಳಿಸದೆ ಅವಳ ಪ್ರೇತವನ್ನು ಬ್ರಾಹ್ಮಣರಿಂದ ಸಂಸ್ಕಾರಗೊಳಿಸಿದನು. ಪಶ್ಚಾತ್ತಾಪದಿಂದ 'ಮನುಷ್ಯನು ಪಾಪವಿಮುಕ್ತನಾಗುವನೆಂಬ ಮಾತು ತಾರೆಯ ಸರ್ವೋತ್ಕೃಷ್ಟ ಮರಣದಿಂದ ವಾಮನನಿಗೆ ಮನವರಿಕೆಯಾಯಿತು ಅವನು ಈ ಈಶ್ವರೀ ನಿಯಮಕ್ಕೆ ತಲೆದೂಗುತ್ತ ನಿಂತಿರಲು, ಅಂತ್ಯಜರು ಒಂದು ಶವವನ್ನು ಎತ್ತಿನ ಬಂಡಿಯ ಮೇಲೆ ಹಾಕಿಕೊಂಡು ಅವನ ಮನೆಯಮುಂದಿನ ಹಾದಿಯವರೆಗೆ ಬಂದರು. ಅಷ್ಟರಲ್ಲಿ ಆ ಶವವು ಎರಡು ತುಂಡಾಗಿ ಕಳಚಿಬಿತ್ತು. ಆಗ ಆ ಅಂತ್ಯಜರು ಅದನ್ನು ಪುನಃ ಬಂಡಿಯ ಮೇಲೆ ಹೇರದೆ ಅದನ್ನು ಬೀದಿಯಲ್ಲಿ ಎಳೆಯುತ್ತ ನಡೆದರು. ಹಾಯ್! ಈ ಶವವು ಯಾವ ಪಾಪಿಯದಾಗಿದ್ದೀತೆಂದು ವಾಮನನು ವಿಚಾರಿಸಲು, ಜೂಜುಗಾರ ಪೇಟೆಯಲ್ಲಿ ವೇಶ್ಯಾವೃತ್ತಿಯನ್ನು ವಹಿಸಿಕೊಂಡಿದ್ದ ಮಾಧವನ ಹೆಂಡತಿಯಾದ ಚಂಚಲಾಕ್ಷಿಯದೆಂಬದು ಗೊತ್ತಾಯಿತು. ಹರ! ಹರ! ಕರ್ಮಭೋಗವು ತಪ್ಪದೆಂದು ಆತನು ಮನಸ್ಸಮಾಧಾನಮಾಡಿಕೊಂಡನು.

ಹೀಗೆ ವಾಮನನು ಲೋಕದಲ್ಲಿ ದುಷ್ಕರ್ಮಕ್ಕೆ ಮೆಚ್ಚಿದವರ ಕರ್ಮಭೋಗಗಳನ್ನು ಪ್ರತಿನಿತ್ಯದಲ್ಲಿಯೂ ನೋಡುತ್ತಿರಲು, ತನ್ನ

ಮಿತ್ರನಾದ ತ್ರಿವಿಕ್ರಮನಿಗೆ ತಾನು ಕೊಟ್ಟ ವಚನವು ಪೂರ್ಣವಾಗುವ ಸಮಯವು ಬಂದಿತು. ಘೋಲಾನ ಮಗಳಾದ ರಾಧೆಯನ್ನು ಉಪಾಯಾಂತರಗಳಿಂದ ವಶಸಗೊಳಿಸಿ ವಾಮನನು ಆಕೆಯಿಂದ ಎಲ್ಲ ಸಂಗತಿಗಳನ್ನು ಕೇಳಿಕೊಂಡಿದ್ದನು. ಘೋಲಾನ ಕೊಲೆಯನ್ನು ಯಾರು ಮಾಡಿರುವರೆಂಬದು ಅವನಿಗೆ ಚನ್ನಾಗಿ ತಿಳಿದಿತ್ತು. ಆದ್ದರಿಂದ ಅವನು ತ್ರಿವಿಕ್ರಮನಿಗೆ ಆಗಾಗ್ಗೆ ಧೈರ್ಯವ ಕೊಡುತ್ತಿದ್ದನು. ಇನ್ನುಮುಂದೆ ಆ ನಿಜವಾದ ಕೊಲೆಗಡಕನನ್ನು ಹೇಗೆ ದಸ್ತಗೀರು ಮಾಡಬೇಕೆಂಬದು ವಾಮನನ ಯೋಚನೆಯಲ್ಲಿತ್ತು. ಹೀಗಿರಲು ಅಕಸ್ಮಾತ್ತಾಗಿ ಭೀಮರಾಯನು ಅವನಿಗೆ ಭೆಟ್ಟಿಯಾದನು. ಅವನು ಕಮಲನಾಭನ ಎಲ್ಲ ಸಂಗತಿಯನ್ನು ಹೇಳಿದ್ದರಿಂದ ವಾಮನನಿಗೆ ಅತ್ಯಾನಂದವಾಯಿತು. ಅವನು ಆ ಕ್ಷಣದಲ್ಲಿ ಭೀಮರಾಯನೊಡನೆ ದೇವದತ್ತನಗರಕ್ಕೆ ಹೋದನು. ಶಿವರಾಯ, ಬಾಬಾಸಾಹೇಬ, ಭೀಮರಾಯ, ವಾಮನರಾಯ ಈ ನಾಲ್ವರು ಒಂದೇಕಡೆಯಲ್ಲಿ ಒಂದೇ ಕಾರ್ಯದ ಸಲುವಾಗಿ ಕೂಡಿದ್ದರಿಂದ ಕಾರ್ಯಸಾಧನೆಗೆ ಸ್ವಲ್ಪಾದರೂ ವಿಲಂಬವಾಗಲಿಲ್ಲ. ವಾಮನನು ಕೂಡಲೆ ಪೋಲೀಸ ಚಾವಡಿಗೆ ಹೋಗಿ, ಇನಸ್ಪೇಕ್ಟರರಿಗೆ ವರದಿಯನ್ನು ಕೊಟ್ಟು ಕಮಲನಾಭನನ್ನು ದಸ್ತಗೀರು ಮಾಡುವಂತೆ ಮ್ಯಾಜಿಸ್ಟ್ರೇಟರಿಂದ ಪರವಾನಿಗೆಯನ್ನು ಪಡಕೊಂಡನು. ಬಳಿಕ ಆ ನಾಲ್ವರು ಕಮಲನಾಭನ ಕಳಸಪೂರ್ಣಿಯ ಮನೆಯಿದ್ದ ಶ್ರೀನಗರಕ್ಕೆ ಹೋದರು. ಅಲ್ಲಿ ಅವರು ಮ್ಯಾಜಿಸ್ಟ್ರೇಟರಿಗೆ ಭೆಟ್ಟಿಯಾಗಿ ತಾವು ತಂದಿದ್ದ ಹುಕುಮು ತೋರಿಸಿ ಅವರಿಂದ ಆಗತಕ್ಕ ಸಹಾಯವನ್ನು ಹೊಂದಿದರು. ಅನಂತರ ಅವರು ಸಬ್‌ಇನಸ್ಪೇಕ್ಟರರನ್ನೂ, ಕೆಲವು ಜನ ಪೋಲೀಸರನ್ನೂ ಕೂಡಿಕೊಂಡು ಕಮಲನಾಭನ ಕಳಸಪೂರ್ಣಿಯ ಮನೆಯನ್ನು ಮುತ್ತಿದರು.

[ 17 ]

ಮನೋರಮೆಯು ಪತ್ರಬರೆದಮೇಲೆ ಅದರ ಪರಿಣಾಮವೇನಾಗುವದೋ ಎಂದು ನಿರೀಕ್ಷಿಸುತ್ತಿದ್ದಳಷ್ಟೇ? ಬಹಳ ದಿವಸಗಳಾದರೂ ಅದರಿಂದಾದ ಯಾವ ಪ್ರಯೋಜನವೂ ಕಂಡುಬಾರದ್ದರಿಂದ ಅವಳು ನಿರಾಶಳಾದಳು. ಇನ್ನು ತಾನೇ ಸ್ವಪ್ರಯತ್ನದಿಂದ ಪಾರಾಗಿಹೋಗಬೇಕೆಂದು ಹವಣಿಸಹತ್ತಿದಳು. ಹೀಗಿರಲು, ಒಂದು ದಿನ ಒಬ್ಬ ಕಾವಲುಗಾರನು ಅವಳ ಸಾಹಸವನ್ನು ಕಂಡುಹಿಡಿದನು. ಕೂಡಲೆ ಅವನು ತನ್ನ ಯಜಮಾನನಿಗೆ ಆ ಸಂಗತಿಯನ್ನು ತಿಳಿಸಿದನು. ತನ್ನ ಎಲ್ಲ ಮಹತ್ವದ ಕಾಗದ-ಪತ್ರಗಳು ಇಲ್ಲದಂತಾದ್ದರಿಂದ ಅವನು ಹುಚ್ಚನಂತೆ ನಿಂತಿರಲು, ತನ್ನ ಚಾಕರನು ಹೇಳಿದ ಸಂಗತಿಯಿಂದ ಅವನಿಗೆ ಆದ ಆನಂದವನ್ನು ವರ್ಣಿಸಲಾಸಲ್ಲ. ಮನೋರಮೆಯೇ ತನ್ನ ಕಾಗದ-ಪತ್ರಗಳನ್ನು ಕದ್ದಿರುವಳೆಂದು ಅವನು ಭಾವಿಸಿದನು. ಆಕ್ಷಣದಲ್ಲಿ ಅವನು ಮನೋರಮೆಯನ್ನು ಬಲುಮೆಯಿಂದ ಉಪಭೋಗಿಸಿ ಅವಳನ್ನು ತನ್ನವಳನ್ನಾಗಮಾಡಿಕೊಳ್ಳಬೇಕೆಂದು ಬಗೆದು ಅವಳ ಕೋಣೆಗೆ ಹೋದನು. ಆಗ ಅಲ್ಲಿ ಮೇಸ್ತ್ರ್ಯಾಮ ಹಾಗು ಮನೋರಮೆಯರು ಕೂಡಿ ಕುಳಿತದ್ದು ಅವನಿಗೆ ಕಂಡಿತು. ಆಗ ಅವನ ಎದೆಯು ಧಸ್ಸೆಂದಿತು. ಅವನು ಮುಂದಕ್ಕೆ ಹೆಜ್ಜೆಯನ್ನಿಕ್ಕದೆ ಹಾಗೇ ಹಿಂದಕ್ಕೆ ತಿರುಗಿ ತನ್ನ ಕಾವಲುಗಾರರಲ್ಲಿ ಹನ್ನೆರಡು ಮಂದಿಯನ್ನು ಕರೆದು ಮನೋರಮೆಯ ಮೇಲೆ ಪಹರೆಯನ್ನಿಡುವಂತೆ ಆಜ್ಞಾಪಿಸಿದನು. ಚಾಣಾಕ್ಷಳಾದ ಮನೋರಮೆಯು, ಕಾವಲುಗಾರರು ತನ್ನ ಮೇಲೆ ಪಹರೆ ಮಾಡುತ್ತಿರುವದನ್ನು ಕಂಡು ತಮ್ಮ ಗುಪ್ತಕಾರಸ್ಥಾನವು ಹೊರಬಿದ್ದು ತಮ್ಮ ಅಂತವಾಗುವದೆಂದು ನಿಶ್ಚಯಿಸಿದಳು. ಆದರೂ ಆ ಸಾಹಸಿಯು ಧೈರ್ಯವ ತಂದುಕೊಂಡು ಕಾವಲುಗಾರರಿಗೆ ಸನ್ನೆಮಾಡಿ ಒಬ್ಬೊಬ್ಬರನ್ನೇ ಒಳಗೆ ಕರೆದು ಮೂರ್ಛೆ ಬರುವ

ಗುಳಿಗೆಗಳನ್ನು ಪ್ರಯೋಗಿಸಿ, ಅವರ ಕೈಕಾಲು ಕಟ್ಟಿ ಕೆಡವಿದಳು. ಏಕಾಂತದಲ್ಲಿರುವ ಲಾವಣ್ಯವತಿಯು ಆಮಂತ್ರಣಕ್ಕೆ ಮರುಳಾಗಿ ಆ ಎಲ್ಲ ಕಾವಲುಗಾರರು ಆಕೆಯ ಬಲೆಯಲ್ಲಿ ಸಿಗಿಬಿದ್ದರು. ಮುಂದೆ ಕೆಲ ಹೊತ್ತಿನಮೇಲೆ ಯಜಮಾನನಾದ ಕಮಲನಾಭನು ಅಲ್ಲಿಗೆ ಬಂದನು. ಮನೋರಮೆಯು ಅವನನ್ನು ಕಂಡಕೂಡಲೆ ಒಂದು ಗುಳಿಗೆಯನ್ನು ತಕ್ಕೊಂಡು ಗುರಿನೋಡಿ ಅವನ ಮೂಗಿನ ಸೊಳ್ಳೆಗೆ ಎಸೆದಳು. ಅದು ತಪ್ಪದೆ ಗುರಿಯಿಟ್ಟ ಸ್ಥಳಕ್ಕೆ ತಲುಪಿತು. ಆಕೂಡಲೆ ಕಮಲನಾಭನು ಮೂರ್ಛೆಬಂದು ಬಿದ್ದನು. ಬಳಿಕ ಮನೋರಮೆಯು ಮೋಹನಸ್ವಾಮಿಯ ಸಹಾಯದಿಂದ ಅವನ ಕೈ-ಕಾಲುಗಳನ್ನು ಚನ್ನಾಗಿ ಕಟ್ಟಿ ಆ ಎಲ್ಲ ಕಾವಲುಗಾರರಿಗೂ, ಕಮಲನಾಭನಿಗೂ ಮೂರ್ಛೆತಿಳಿಯುವ ಗುಳಿಗೆಗಳನ್ನು ಮೂಸಿನೋಡಿಸಿದಳು. ಆಗ ಎಲ್ಲರೂ ಮೂರ್ಛೆ ತಿಳಿದವರಾಗಿ ಮೇಲಕ್ಕೇಳಲಾರದೆ ಅಲ್ಲಿಯೇ ಉರುಳಾಡಹತ್ತಿದರು.

ಈ ಮೇರೆಗೆ ಆ ಕಳಸೂತ್ರಿಯ ಮನೆಯಲ್ಲಿ ಅನರ್ಥವು ನಡೆದಿರಲು, ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ಶಿವರಾಯ, ಬಾಬಾಸಾಹೇಬ ಮೊದಲಾದವರು ಆ ಮನೆಗೆ ಪೋಲೀಸರೊಡನೆ ಹೋದರು. ಮನೆಯ ಬಾಗಿಲವು ತೆರೆದದ್ದರಿಂದ ಎಲ್ಲರೂ ಸಟ್ಟನೆ ಒಳಗೇ ಪ್ರವೇಶಮಾಡಿದರು. ಶಿವರಾಯನು ಮೇಲೇರಿಹೋಗಲು, ಜನರ ಕಾಲ ಸಪ್ಪಳಕ್ಕೆ ಬೆದರಿ ಮನೋರಮೆಯು ಹಣಿಕಿ ನೋಡಲು, ಆಕೆಗೆ ಶಿವರಾಯನೇ ಗೋಚರಿಸಿದನು ಅಣ್ಣನು ತಂಗಿಯನ್ನು ನೋಡಿದನು. ತಂಗಿಯು ಅಣ್ಣನನ್ನು ನೋಡಿದಳು. ಎಲ್ಲರೂ ಆ ದಿವಾಣಖಾನೆಗೆ ಹೋದರು ಮನೋರಮೆಯು ನಡೆದ ವೃತ್ತಾಂತವನ್ನೆಲ್ಲ ಹೇಳಿದಳು. ಅಪರಾಧಿಯಾದ ಕಮಲನಾಭನು ಪೋಲೀಸರ ಕೈಗೆ ಸಿಕ್ಕನು. ಬಳಿಕ ಸಬ್‌ಇನಸ್ಪೇಕ್ಟರನು ಕಮಲನಾಭ ಮೊದಲಾದವರನ್ನು ದಸ್ತ

ಗೀರುಮಾಡಿ, ತಂದಿದ್ದ ಬೇಡಿಗಳಿಂದ ಅವರನ್ನು ಅಲಂಕರಿಸಿ, ಕಚೇರಿಗೆ ತಕ್ಕೊಂಡು ಹೊರಟನು. ಶ್ರೀನಗರದ ನ್ಯಾಯಕೋರ್ಟಿನಲ್ಲಿ ಕಮಲನಾಭನ ಅಪರಾಧದ ನ್ಯಾಯನಿರ್ಣಯವು ನಡೆಯಿತು. ಆ ಕಾಲಕ್ಕೆ ಅವನ ಸ್ವಹಸ್ತದ ಡಾಯರಿಗಳೂ, ಕೆಲವು ಪತ್ರಗಳೂ, ಮಸೂದೆಗಳೂ ಹಾಜರಾದವು. ಅವುಗಳನ್ನು ನೋಡಿ ನ್ಯಾಯಾಧೀಶನು ಬೆರಗಾದನು ಬೇರೆ ಯಾವ ಸಾಕ್ಷಿಗಳನ್ನೂ ತಕ್ಕೊಳ್ಳದೆ ನ್ಯಾಯಾಧೀಶನು ಆತನಿಗೆ ಆಮರಣ ಕರಿನೀರಿನ ಶಿಕ್ಷೆಯನ್ನು ವಿಧಿಸಿದನು. ಕೋರ್ಟಿಗೆ ಹಾಜರಾದ ಕಾಗದಪತ್ರಗಳಮೇಲಿಂದ ಶ್ರೀರಂಗಪಟ್ಟಣದಲ್ಲಿದ್ದ ಶ್ರೀಪತಿಯೂ ಇದರಲ್ಲಿ ಕೂಡಿಕೊಂಡಿರುತ್ತಾನೆಂದು ಕಂಡುಬಂದದ್ದರಿಂದ ಆತನಿಗೆ ನ್ಯಾಯಾಧೀಶನು ಆಮರಣ ಸಾದಾ ಕೈದಿಯ ಶಿಕ್ಷೆಯನ್ನು ವಿಧಿಸಿದನು.

ಪ್ರಿಯವಾಚಕರೇ, ನೋಡಿದಿರಾ! ದುಷ್ಕರ್ಮದ ಮಾಹಾತ್ಮ್ಯೆಯನ್ನು! ದುರ್ಜನಶಿರೋಮಣಿಗಳಾದ ಕಮಲನಾಭ-ಶ್ರೀಪತಿಯರು ತಮ್ಮ ಸಂಪತ್ತಿಯನ್ನು ತೊರೆದು ಒಬ್ಬನು ದ್ವೀಪಾಂತರವನ್ನೂ, ಇನ್ನೊಬ್ಬನು ಕಾರಾಗೃಹವನ್ನೂ ಪ್ರವೇಶಮಾಡಿದರು. ಚಂಚಲಾಕ್ಷಿಯಲ್ಲಿ ಆಸಕ್ತನಾದ ಶಂಭುವು ಮಹಾರೋಗಪೀಡಿತನಾಗಿ ಮರಣವನ್ನಪೇಕ್ಷಿಸತೊಡಗಿದನು. ಕುಟಿಲೆಯಾದ ರಾಘಯು ಆತ್ಮಹತ್ಯೆ ಮಾಡಿಕೊಂಡಳು. ಈ ರೀತಿಯಾಗಿ ದುಷ್ಕರ್ಮ ಪ್ರವೃತ್ತರಾದ ದುರಾತ್ಮರೆಲ್ಲರು ವಿನಾಶಪಂಥವನ್ನು ಹಿಡಿದಿರಲು, ಇತ್ತ ಶಿವರಾಯನು ಮನೋರಮೆ ಮೇಘಶ್ಯಾಮರೊಡನೆ ರಾಮಕೋಟೆಗೆ ಬಂದನು ಈ ಮಂಗಲ ವರ್ತಮಾನವು ಸುತ್ತಲೂ ಪಸರಿಸಿತು ಕಮಲನಾಭನ ಪ್ರಕರಣದಲ್ಲಿ ಘೋರಾನ ಕೊಲೆಯ ನಿರ್ಣಯವಾದ್ದರಿಂದ ತ್ರಿವಿಕ್ರಮನು ಬೈಲಿಗೆ ಬಂದು ಸುಲೋಚನೆಯೇ ಮೊದಲಾದ ಎಲ್ಲ ಹೆಂಗಸರನ್ನು ರಾಮಕೋಟೆಗೆ ಕರೆದೊಯ್ದನು. ದೇಶಭ್ರಷ್ಟನಾಗಿದ್ದ ವಾಸು

ದೇವರಾಯನು ಹಿಮಾಲಯದಡಿಯಲ್ಲಿ ಒಂದು ಕಬ್ಬಿಣ ಕಾರಖಾನೆಯನ್ನು ತೆಗೆದು ಅದರಲ್ಲಿ ಲಕ್ಷಾಂತರ ರೂಪಾಯಿಗಳನ್ನು ಸಂಪಾದಿಸಿದ್ದನು. ಅವನಿಗೆ ಇದೇ ಕಾಲಕ್ಕೆ ತನ್ನ ಊರಿಗೆ ಹೋಗುವ ಇಚ್ಛೆಯಾದ್ದರಿಂದ ಅವನು ತನ್ನ ಅಪಾರಸಂಪತ್ತಿಯೊಡನೆ ರಾಮಕೋಟೆಗೆ ಬಂದನು. ಬಂಗಾರಕ್ಕೆ ಸುಗಂಧವು ಕೂಡಿದಹಾಗಾಯಿತು. ಆಗ ವಾಸುದೇವರಾಯನ ಪರಿವಾರಕ್ಕಾದ ಆನಂದವನ್ನು ವರ್ಣಿಸುವ ಶಕ್ತಿಯು ನಮ್ಮ ಲೇಖಣಿಕೆಯಲ್ಲಿಲ್ಲ. ಬಹಳ ದಿವಸಕ್ಕೆ ಬಾಂಧವರ ದರ್ಶನ, ಅದರಲ್ಲಿಯೂ ಅಪಾರಸಂಪತ್ತಿಯ ಲಾಭ; ಕೇಳುವದೇನು? ಅವರಿಗೆ ಪ್ರತ್ಯಕ್ಷ ಸ್ವರ್ಗಸುಖವೇ ಪ್ರಾಪ್ತವಾದಂತಾಯಿತು. ಬಳಿಕ ಸುಲೋಚನಾದಿ ಸ್ತ್ರೀಯರು ತಾವು ಪಟ್ಟ ಕಷ್ಟವನ್ನು ವಾಸುದೇವರಾಯನಿಗೆ ಶಿಂ ತಿಳಿಸಿದರು. ಮಹಾದೇವ ವಿಶ್ವನಾಥರನ್ನು ಹೇಗೆ ಕೆಲಸದಿಂದ ತೆಗೆದು ವಾಸುದೇವರಾಯ ಹಾಗು ಶಿವರಾಯರೇ ಮೊದಲಾದವರು ಚಾಪವಿಡುತ್ತಿರಲು, ಬಟುಕನು ಆಮರಣ ಕಠಿಣ ರಿಕ್ತಿಯನ್ನು ಹೊಂದಿದ್ದುದರಿಂದ ವಾರಸಾದಾರಿಂದ ಅವನ ಆಸ್ತಿಯೂ ವಾಸುದೇವರಾಯನ ಕಬ್ಜಕ್ಕೇ ಬಂದಿತು. ಆ ಆಸ್ತಿಯ ಜೊತೆಗೆ ಅವನ ಎಲ್ಲ ಕಾಗದಪತ್ರಗಳೂ ವಾಸುದೇವನ ಕೈಸೇರಿದವು.

ಮಹಾದೇವ ವಿಶ್ವನಾಥರು ಜಪಾನಕ್ಕೆ ಹೋಗಿದ್ದರಷ್ಟೇ? ಅವರು ಪರದೇಶದಿಂದ ವಾಸುದೇವರಾಯನ ಹೆಸರಿನಿಂದ ಪತ್ರಬರೆಯುತ್ತಿದ್ದರು. ಆದರೆ ಅವುಗಳನ್ನೆಲ್ಲ ಬಟುಕನೇ ಎತ್ತಿ ಹಾಕಿ ಅವರಿಗೆ ಪ್ರತಿಉತ್ತರಗಳನ್ನು ಕೊಡುತ್ತಿದ್ದನು. ಆತನು ಹೀಗೆ ಉತ್ತರ ಕೊಡುವಾಗ ಒಮ್ಮೆ ವಾಸುದೇವರಾಯನು ದೇಶಭ್ರಷ್ಟನಾದವನೆಂದೂ ಸುಲೋಚನಾದಿ ಎಲ್ಲ ಸ್ತ್ರೀಯರು ವ್ಯಭಿಚಾರಿಣಿಯರಾಗಿ ಓಡಿಹೋದರೆಂದೂ ಬರೆದು ತಿಳಿಸಿದ್ದನು. ಈ ದುಷ್ಟವಾರ್ತೆಯಿಂದ ಮಹಾದೇವ-ವಿಶ್ವನಾಥರು ತಮ್ಮ ಮನೆತನದ ಎಲ್ಲ ಆಸೆಯನ್ನು ತೊರೆದು ನಿರಾಶೆಯಿಂದ ಬಟುಕನಿಗೆ ಉತ್ತರಕೊಟ್ಟಿದ್ದರು. ಈ ಎಲ್ಲ ಪತ್ರಗಳನ್ನು ನೋಡಿ ವಾಸುದೇವರಾಯನು ಅತ್ಯಂತ ಖಿನ್ನನಾದನು. ಬಳಿಕ ಆತನು, ಮಹಾದೇವ ವಿಶ್ವನಾಥರಿಗೊಂದು ವಿಸ್ತಾರಪತ್ರವನ್ನು ಬರೆದನು. ಆ ಪತ್ರದಲ್ಲಿ ಆತನು ಬಟುಕನನೀಚತನವನ್ನು ವರ್ಣಿಸಿ ಅವ

ನಿಗಾದಶಿಕ್ಷೆಯನ್ನು ತಿಳಿಸಿದ್ದನು. ಮತ್ತು ಇಂದಿನವರೆಗೆ ಅವನು ಬರೆದ ಎಲ್ಲ ಸಂಗತಿಗಳು ಕೇವಲ ಮೃಷಾಮಯವೆಂದೂ ಸ್ಪಷ್ಟವಾಗಿ ಬರೆದಿದ್ದನು. ಮಹಾದೇವ-ವಿಶ್ವನಾಥರು ಪತ್ರವನ್ನೋದಿ ಬೆರಗಾದರು. ತಮ್ಮ ಕಕ್ಕನಾದ ಬಟುಕನ ನೀಚತನವು ಅವರ ಕಣ್ಣುಮುಂದೆ ಕಟ್ಟಿತು.

ಇಂದು ರಾಮಕೋಟಿಯಲ್ಲಿ ವಾಸುದೇವರಾಯನ ಮನೆಯಲ್ಲಿ ಬಹುಸಮಾರಂಭ; ಮಹಾದೇವ-ವಿಶ್ವನಾಥರು ಜಮಖಾನದಿಂದ ಬಂದಿದ್ದರು. ಬಾಗಿಲಲ್ಲಿ ಮಂಗಳವಾದ್ಯಗಳು ಮೊಳಗುತ್ತಿದ್ದವು. ಒಂದು ಕಡೆಯಲ್ಲಿ ನಮ್ಮ ಕಥಾನಾಯಿಕೆಯಾದ ಮನೋರಮೆಯು [illegible] ವ್ಯಾಮನ ಸಮ್ಮುಖದಲ್ಲಿ [illegible] ಪ್ರತೀಕ್ಷೆ ಮಾಡುತ್ತಿದ್ದಳು. ಇನ್ನೊಂದು ಕಡೆಗೆ [illegible] ರಾಯರ ವಿವಾಹವು ನಡೆದಿತ್ತು; [illegible] ಮೇಬನು ಕಾದಂಬಿನಿಯು [illegible] ನೋಡಿದರೂ ಮಾಂಗಲ್ಯ[illegible] ನೋಡಮೊಗವನ್ನು ಬಹಳ[illegible] ಯ ಮನೆಯಲ್ಲಿ ತನ್ನ [illegible] ಗಳನ್ನು [illegible] ಇಂದಿನ ಈ ಶುಭಯೋಗವ ಕೂಡಿಬರುತ್ತಿದ್ದಿಲ್ಲವೆಂದು [illegible].

ಮನೋರಮೆಯು ಹಾಗು ಆಕೆಯ ಅಕ್ಕತಂಗಿಯರ ಲಗ್ನಗಳು ಯಥಾಸಾಂಗವಾಗಿ ಜರುಗಿದವು. ಅನಂತ ಸಂಕಟಗಳನ್ನು [illegible] ಸುಮಂಗಲೆಯರು ತಮ್ಮ ಪತಿಗಳ ವಾಮಪಾರ್ಶ್ವದಲ್ಲಿ ಒಪ್ಪಿದರು. ಸುಲೋಚನಾದಿಸ್ತ್ರೀಯರು ತಮ್ಮ ಅಣ್ಣತಮ್ಮಂದಿರ ಹಾಗು ಭಗಿನಿಯರ ಉತ್ಕರ್ಷವನ್ನು ನೋಡಿ ತುಂಬಾ ಸಂತೋಷಪಟ್ಟರು; ಪಾರ್ವತಿಯ ಆನಂದಕ್ಕಂತೂ ಆಳತೆಯೇ ಉಳಿಯಲಿಲ್ಲ!! ಎಲೈ ಸುವಿಚಾರಿಯಾದ ಸತ್ವಸ್ಥ ಕುಟುಂಬವೇ ನಿನಗೆ ಸರ್ವದಾ ಹೀಗೆಯೇ ಜಯವಾಗಲಿ!!!

—ಸಂಪೂರ್ಣ.—